CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಅಕ್ಟೋಬರ್ ೧೪, ೨೦೦೪ (ಆಶ್ವಯುಜ ೨೨, ಶಕ ವರ್ಷ ೧೯೨೬) | ಸಂಚಿಕೆ ೪೨ |
| --- | --- | --- |

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ನ್ಯಾಯಾಲಯದಲ್ಲಿ**
**ದಾವಾ ಸಂಖ್ಯೆ: ಡಿಆರ್‌ಬಿ-2/ಡಿ/287/2004-2005**

**ವಾದಿ:**
ವ್ಯವಸ್ಥಾಪಕರು,
ದಿ ಕಮರ್ಷಿಯಲ್ ಪತ್ತಿನ ಸಹಕಾರ ಸಂಘ ನಿಯಮಿತ
ನಂ. 1031/ಎ, 26ನೇ ಮೇನ್ ರಸ್ತೆ, 9ನೇ ಬ್ಲಾಕ್,
ಜಯನಗರ, ಬೆಂಗಳೂರು - 560 069

ವಿರುದ್ಧ

**ಆರೋಪಿತರು:**
1. ಶ್ರೀ ಬಿ.ಎನ್. ನರಸಿಂಹಮೂರ್ತಿ ಕೋಂ ಕೆ.ಹೆಚ್. ಲಕ್ಷ್ಮೀನರಸಿಂಹ್ಯಯ್ಯ, ನಂ. 222, 2ನೇ ಮೇನ್ ರಸ್ತೆ, ಶ್ರೀ ಗಂಗಾಧರೇಶ್ವರ ನಿಲಯ, ಹನುಮನಗಿರಿ ನಗರ, ಚಿಕ್ಕಲ್ಲಸಂದ್ರ, ಬೆಂಗಳೂರು-61.
2. ಶ್ರೀಮತಿ ಸಿ.ಕೆ. ನಾಗರತ್ನ ಕೋಂ ಶಿವಕುಮಾರ್, ನಂ. 3/ಎ, 36ನೇ ಕ್ರಾಸ್, 9ನೇ ಬ್ಲಾಕ್, ಜಯನಗರ, ಬೆಂಗಳೂರು-560 069.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರ ಪ್ರಕಾರ ಚರಾಸ್ತಿಯನ್ನು ಜಪ್ತಿ (ಅಟ್ಯಾಚ್) ಮಾಡುವ ಬಗ್ಗೆ ನೋಟೀಸ್:-**

ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರನ್ವಯ ಈ ನ್ಯಾಯಾಲಯದ ಮುಂದೆ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 74,28,705.00 ಗಳನ್ನು ದಿನಾಂಕ: 1.4.2002 ರಿಂದ ಸಾಲಿಯಾನ ಶೇಕಡ 18 ರಂತೆ ಬಡ್ಡಿ ಮತ್ತು ಶೇಕಡ 2 ರಂತೆ ಸುಸ್ತಿ ಬಡ್ಡಿಯಂತೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ದಾವಾ ಅರ್ಜಿಯನ್ನು ದಾವಾ ಸಂಖ್ಯೆ: ಡಿಆರ್‌ಬಿ-2/ಡಿ/287/2004-2005 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ, (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. 1ನೇ ಪ್ರತಿವಾದಿಯು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ / ಡಿಕ್ರಿ ನೀಡಿದರೂ, ಸದರಿ ಅವಾರ್ಡ್ / ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆಯೆಂದು ವಾದಿಯು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103 ರನ್ವಯ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103 ರ ಅರ್ಜಿಯಲ್ಲಿ ತಿಳಿಸಿರುವ ಅಂಶಗಳು ನಿಜವೆಂದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ 1ನೇ ಪ್ರತಿವಾದಿಯ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ/ ಪರಭಾರೆ ಮಾಡದಂತೆ ತಡೆ ಹಿಡಿಯದೇ ಇದ್ದಲ್ಲಿ ವಾದಿಯ ದಾವಾ

ಅರ್ಜಿಯಲ್ಲಿ ನೀಡಲಿರುವ ಅವಾರ್ಡ್ / ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959 ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮಾಂಕ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎನ್. ರುದ್ರಪ್ಪ, ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು 1ನೇ ಪ್ರತಿವಾದಿಯ ಹೆಸರಿನಲ್ಲಿರುವ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರಾಸ್ತಿಯನ್ನು ಷರತ್ತಿಗೆ ಒಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ನೇ ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದ್ದಲ್ಲಿ ರೂ. 74,28,705.00 (ರೂ. ಎಪ್ಪತ್ತನಾಲ್ಕು ಲಕ್ಷದ ಇಪ್ಪತ್ತೆಂಟು ಸಾವಿರದ ಏಳು ನೂರ ಐದುಗಳು ಮಾತ್ರ) ಗಳನ್ನು ವಾದಿ ಸಂಘದಲ್ಲಿ ಅಮಾನತ್ ಖಾತೆಗೆ ದಿನಾಂಕ: 15.10.2004 ರೊಳಗಾಗಿ ಜಮಾ ಮಾಡಿ, ಜಮಾ ಮಾಡಿದ ಬಗ್ಗೆ ಅಧಿಕೃತ ಮೂಲ ಚಲನ್ / ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ 1ನೇ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ 1ನೇ ಪ್ರತಿವಾದಿಯು ಮೇಲೆ ತಿಳಿಸಿರುವಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಬೇಕಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸ್ ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಸ್ವತ್ತಿನ ವಿವರ**

1) ಬೆಂಗಳೂರು ನಗರ, ಜೆ.ಪಿ. ನಗರ, 6ನೇ ಫೇಸ್‌ನಲ್ಲಿರುವ 30 x 70 ಅಡಿ ವಿಸ್ತೀರ್ಣವುಳ್ಳ (ಪೂರ್ವ ಪಶ್ಚಿಮಕ್ಕೆ 30 ಅಡಿ) ಮತ್ತು (ಉತ್ತರ ದಕ್ಷಿಣಕ್ಕೆ 70 ಅಡಿ) ನಂ. 673 ರಲ್ಲಿ ಕಟ್ಟಿರುವ ವಾಸದ ಮನೆ ಸೇರಿದಂತೆ ಚೆಕ್ಕುಬಂದಿ:-

ಪೂರ್ವಕ್ಕೆ - ನಿವೇಶನ ಸಂಖ್ಯೆ - 674
ಪಶ್ಚಿಮಕ್ಕೆ - ನಿವೇಶನ ಸಂಖ್ಯೆ - 672
ಉತ್ತರಕ್ಕೆ - ರಸ್ತೆ
ದಕ್ಷಿಣಕ್ಕೆ - ನಿವೇಶನ ಸಂಖ್ಯೆ - 372

2) ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕು ಕಸಬಾ ಹೋಬಳಿ, ಬಿದರಕಾಲಹಳ್ಳಿ ಗ್ರಾಮದಲ್ಲಿ ಸರ್ವೆ ನಂ. 7 ರಲ್ಲಿ 2 ಎಕರೆ 28 ಗುಂಟೆ ಚೆಕ್ಕುಬಂದಿ:-

ಪೂರ್ವಕ್ಕೆ - ಸರ್ಕಾರಿ ಭೂಮಿ
ಪಶ್ಚಿಮಕ್ಕೆ - ಇತರೆ ಆಸ್ತಿ
ಉತ್ತರಕ್ಕೆ - ಶ್ರೀ ನಾರಾಯಣ ರೆಡ್ಡಿಯವರ ಭೂಮಿ
ದಕ್ಷಿಣಕ್ಕೆ - ಶ್ರೀ ಪಿ. ಕೃಷ್ಣರೆಡ್ಡಿಯವರ ಭೂಮಿ

3) ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕು ಕಸಬಾ ಹೋಬಳಿ, ಬಿದರಕಾಲಹಳ್ಳಿ ಗ್ರಾಮದಲ್ಲಿ ಸರ್ವೆ ನಂ. 7 ರಲ್ಲಿ 1 ಎಕರೆ ಚೆಕ್ಕುಬಂದಿ:-

ಪೂರ್ವಕ್ಕೆ - ಸರ್ವೆ ನಂ. 7
ಪಶ್ಚಿಮಕ್ಕೆ - ಸರ್ವೆ ನಂ. 7
ಉತ್ತರಕ್ಕೆ - ಸರ್ವೆ ನಂ. 7
ದಕ್ಷಿಣಕ್ಕೆ - ಶ್ರೀ ಸುಂದರರಾಮರೆಡ್ಡಿಯವರ ಭೂಮಿ

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 16.9.2004 ರಂದು ನೀಡಿರುತ್ತೇನೆ.

ಸಿ.ಎನ್. ರುದ್ರಪ್ಪ
ಸಹಕಾರ ಸಂಘಗಳ ಉಪ ನಿಬಂಧಕರು-2,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್. 1330

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 2ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು-01**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/40/ನಿಯವಿ/2004, ದಿನಾಂಕ: 14ನೇ ಸೆಪ್ಟೆಂಬರ್ 2004**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ಅರಸೀಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ

ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಅರಸೀಕೆರೆ ತಾಲ್ಲೂಕಿನ "ಜೆ.ಸಿ. ಪುರ" ಗ್ರಾಮ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು "ಉಪಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3. ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6. ಸಜ್ಜೆ, 7. ಜವೆ ಗೋಧಿ, 8. ಜೋಳ, 9. ಕಂಬು, 10. ಮೆಕ್ಕೆ ಜೋಳ, 11. ನವಣೆ, 12. ಭತ್ತ, 13. ರಾಗಿ, 14. ಅಕ್ಕಿ, 15. ಸಾಮೆ (ಸಾವೆ), 16. ಗೋಧಿ, 17. ಅಂಟುವಾಳ, 18. ಬೊಂಬು, 19. ಬೆತ್ತ, 20. ಹಿಪ್ಪೆಬೀಜ, 21. ಹೊಂಗೇಬೀಜ, 22. ಬೇವಿನಬೀಜ, 23. ಸೀಗೇಕಾಯಿ, 24. ಹುಣಸೇಹಣ್ಣು, 25. ಹುಣಸೇಬೀಜ, 26. ಸೇಬು, 27. ಬಾಳೆಹಣ್ಣು, 28. ಬೋರೆಹಣ್ಣು, 29. ಹುಳಿಹಣ್ಣುಗಳು, 30. ಚಕ್ಕೋತ ಹಣ್ಣು, 31. ಪೇರಲೆಹಣ್ಣು (ಸೀಬೆಹಣ್ಣು), 32. ದ್ರಾಕ್ಷಿ, 33. ಹಲಸಿನಹಣ್ಣು, 34. ಜಂಬುನೇರಳೆ ಹಣ್ಣು, 35. ನಿಂಬೆಹಣ್ಣು, 36. ಕರಬೂಜ, 37. ಮಾವಿನಹಣ್ಣು, 38. ಮೂಸಂಬಿ, 39. ಮರಸೇಬು, 40. ಪೈನಾಪಲ್ (ಅನಾನಸ್), 41. ಪಪ್ಪಾಯಿಹಣ್ಣು (ಪರಂಗಿಹಣ್ಣು), 42. ದಾಳಿಂಬೆಹಣ್ಣು, 43. ಸಪೋಟಾ, 44. ಸಿದ್ದೋಟ, 45. ಕಿತ್ತಳೆ, 46. ಕಲ್ಲಂಗಡಿ, 47. ನೆಲಗಡಲೆ (ಶೇಂಗಾ) (ಕಾಯಿ ಮತ್ತು ಬೀಜ), 48. ಹರಳುಬೀಜ, 49. ಹತ್ತಿಬೀಜ, 50. ಅಗಸೆಬೀಜ, 51. ಸಾಸುವೆ, 52. ಹುಚ್ಚೆಳ್ಳು, 53. ಕುಸುಬೆ, 54. ಎಳ್ಳು, 55. ಸೂರ್ಯಕಾಂತಿಬೀಜ, 56. ಸೋಯಾಬಿನ್, 57. ಅಡಿಕೆ, 58. ಗೋಡಂಬಿಬೀಜ, 59. ಒಣಮೆಣಸಿನಕಾಯಿ, 60. ತೆಂಗಿನಕಾಯಿ, 61. ಕೊಬ್ಬರಿ, 62. ಕೊತ್ತಂಬರಿಬೀಜ (ಧನಿಯಾ), 63. ಬೆಳ್ಳುಳ್ಳಿ, 64. ಶುಂಠಿ, 65. ಮೆಂತ್ಯ, 66. ಕಾಳುಮೆಣಸು, 67. ಅರಿಶಿನ, 68. ಅಲಸಂದೆ (ಇಡೀ ಮತ್ತು ಒಡೆದ), 69. ಅವರೆ (ಇಡೀ ಮತ್ತು ಒಡೆದ), 70. ಕಡಲೆ (ಇಡೀ ಮತ್ತು ಒಡೆದ), 71. ಉದ್ದು (ಇಡೀ ಮತ್ತು ಒಡೆದ), 72. ಬುಲ್ಲರ್ (ಇಡೀ ಮತ್ತು ಒಡೆದ), 73. ಹೆಸರು (ಇಡೀ ಮತ್ತು ಒಡೆದ), 74. ಹುರುಳಿ, 75. ಲಾಕ್ (ಇಡೀ ಮತ್ತು ಒಡೆದ), 76. ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77. ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78. ಬಟಾಣಿ, 79. ತೊಗರಿ (ಇಡೀ ಮತ್ತು ಒಡೆದ), 80. ಮೋತ್ (ಇಡೀ ಮತ್ತು ಒಡೆದ), 81. ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ), 82. ಕಾಯಿಗಳು, 83. ಹಸಿರುಮೆಣಸಿನ ಕಾಯಿ, 84. ಈರುಳ್ಳಿ, 85. ಆಲೂಗಡ್ಡೆ, 86. ಸುವರ್ಣಗೆಡ್ಡೆ, 87. ಸಿಹಿಗೆಣಸು (ಗೆಣಸು), 88. ಟೊಮ್ಯಾಟೋ, 89. ಬೀಟೆ (ರೋಸ್‌ವುಡ್), 90. ಬಿಲ್ವಾಲ, 91. ಉರುವಲು ಕಟ್ಟಿಗೆ, 92. ಗಂಜಾನ್, 93. ಹಡಗ, 94. ಹಳದಿ, 95. ಹನಿಮತ್ತಲ್, 96. ಹೊನ್ನೆ, 97. ಐಯಾನಿ, 98. ಹಲಸಿನಮರ, 99. ಜಂಬ, 100. ಕಲನ್, 101. ಕಿಂಡಲ್, 102. ಮಾವಿನಮರ, 103. ಮತ್ತಿ, 104. ನಂದಿ, 105. ರಾಂಪತ್ರೆ, 106. ತೇಗ (ಸಾಗವಾನಿ), 107. ಬಿಳಿ ದೇವದಾರು (ಕೇದರ), 108. ಸಿಲ್ವರ್ ಓಕ್, 109. ನೀಲಗಿರಿ, 110. ವೀಳ್ಯೆದೆಲೆ, 111. ಬೆಲ್ಲ, 112. ತೆಂಗಿನಕಡ್ಡಿ, 113. ಒಣದ್ರಾಕ್ಷಿ.

**ಅನುಸೂಚಿ**

ಅರಸೀಕೆರೆ ತಾಲ್ಲೂಕಿನ ಜೆ.ಸಿ. ಪುರ ಗ್ರಾಮದ ಸರ್ವೆ ನಂ. 99 ರಲ್ಲಿ 2 ಎಕರೆ 30 ಗುಂಟೆ ಜಮೀನಿನಲ್ಲಿ ಹಾಲಿ ಸಂತೆ ನಡೆಯುತ್ತಿರುವ ಈ ಕೆಳಗಿನ ಸೀಮಾಬದ್ಧ ಸ್ಥಳ:-

| | | |
|---|---|---|
| ಪೂರ್ವಕ್ಕೆ | - | ಪಂಚಾಯಿತಿ ರಸ್ತೆ |
| ಪಶ್ಚಿಮಕ್ಕೆ | - | ಪಂಚಾಯಿತಿ ರಸ್ತೆ |
| ಉತ್ತರಕ್ಕೆ | - | ಪಂಚಾಯಿತಿ ರಸ್ತೆ |
| ದಕ್ಷಿಣಕ್ಕೆ | - | ಗ್ರಾಮ ಪಂಚಾಯಿತಿ ನಿವೇಶನ, ಮುಸ್ಲಿಂ, ಘೋರಿ ಜಾಗ ಮತ್ತು ಉರ್ದು ಸರ್ಕಾರಿ ಪ್ರಾಥಮಿಕ ಪಾಠಶಾಲೆ |

**ಸೈಯದ್ ಜಮೀರ್ ಪಾಷಾ**

ಪಿ.ಆರ್. 1331 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು.

**ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ**

**ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು ಹಾಗೂ ಅಧ್ಯಕ್ಷರು ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು ರವರ ಕಛೇರಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷೆಯ ಅಧಿಸೂಚನೆ**

**ಸಂಖ್ಯೆ: ಡಿಎಫ್‌ಬಿ/ಬಿಎಲ್‌ಆರ್/ಬಿಓಇ/ಸಿಆರ್-27/2004-05, ದಿನಾಂಕ: 6ನೇ ಸೆಪ್ಟೆಂಬರ್ 2004**

ಮುಂದಿನ ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷೆಯನ್ನು ದಿನಾಂಕ: 2.12.2004 ಮತ್ತು 3.12.2004 ರಂದು ಜರುಗಿಸಲು ಹಂಗಾಮಿಯಾಗಿ ನಿಗದಿಪಡಿಸಲಾಗಿದೆ.

ಆಸಕ್ತ ಅಭ್ಯರ್ಥಿಗಳು, ಪರೀಕ್ಷೆಯ ಅರ್ಜಿ ನಮೂನೆಗಳಿಗಾಗಿ ಹತ್ತು ರೂಪಾಯಿಗಳ ಅಂಚೆ ಚೀಟಿ ಹಚ್ಚಿದ ಸ್ವವಿಳಾಸವುಳ್ಳ ಲಕೋಟೆಯೊಂದಿಗೆ ಕಾರ್ಯದರ್ಶಿ, ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷಾ ಮಂಡಳಿ, ಕಾರ್ಮಿಕ ಭವನ, 2ನೇ ಮಹಡಿ, ಬೆಂಗಳೂರು ಡೈರಿ ಸರ್ಕಲ್ ಹತ್ತಿರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29, ಇವರಿಗೆ ಮನವಿ ಸಲ್ಲಿಸಿ ಪಡೆದುಕೊಳ್ಳಬಹುದು. ಪರೀಕ್ಷೆಗಾಗಿ ಕುಳಿತುಕೊಳ್ಳಬಯಸುವ ಅಭ್ಯರ್ಥಿಗಳು ಈ ಕೆಳಕಂಡಂತೆ ಕನಿಷ್ಠ ಅರ್ಹತೆ ಮತ್ತು ಅನುಭವ ಹೊಂದಿರಬೇಕಾಗಿರುತ್ತದೆ.

**ವಯೋಮಿತಿ, ವಿದ್ಯಾರ್ಹತೆ ಮತ್ತು ಅನುಭವ**

ಬಾಯ್ಲರ್ ಆಪರೇಷನ್ ಇಂಜಿನಿಯರ್ ಪರೀಕ್ಷೆಗೆ ಕುಳಿತುಕೊಳ್ಳಬಯಸುವ ಅಭ್ಯರ್ಥಿಯ ವಯಸ್ಸು 23 ವರ್ಷಕ್ಕಿಂತ ಕಡಿಮೆ ಇರಬಾರದು. ಹಾಗೂ

1. ಮಾನ್ಯತೆ ಪಡೆದ ಬಾಯ್ಲರುಗಳ ಮತ್ತು ಆ್ಯಕ್ಸಲರೀಸ್‌ಗಳನ್ನು ತಯಾರಿಸುವ ಅಥವಾ ದುರಸ್ತಿ ಮಾಡುವ ಕಾರ್ಯಗಾರದಲ್ಲಿ ಪೂರ್ಣ ಅವಧಿಯ ಅಪರೆಂಟಿಶಿಪ್ ಇಂಜಿನಿಯರ್ ಕೋರ್ಸ್ ಅನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.

ಅಥವಾ

ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್ (ಇಂಡಿಯಾ) ಇವರಿಂದ ಮಾನ್ಯತೆ ಪಡೆದ ವಿದ್ಯಾಸಂಸ್ಥೆಯಿಂದ ಮೆಕ್ಯಾನಿಕಲ್ ಅಥವಾ ಎಲೆಕ್ಟ್ರಿಕಲ್ ಇಂಜಿನಿಯರಿಂಗ್‌ನಲ್ಲಿ ಡಿಗ್ರಿ ಅಥವಾ ಡಿಪ್ಲೋಮಾ ವಿದ್ಯಾರ್ಹತೆಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರಬೇಕು.

2. ಎರಡು ಬಾಯ್ಲರ್‌ಗಳಿಗಿಂತ ಕಡಿಮೆ ಇರದ ಬಾಯ್ಲರುಗಳ ಸಮೂಹದಲ್ಲಿ ಮತ್ತು ಪ್ರತಿಯೊಂದು ಬಾಯ್ಲರಿನ ಹೀಟಿಂಗ್ ಸರ್ಫೆಸ್ ಒಂದು ಸಾವಿರ ಚದರ ಅಡಿಗಿಂತ ಕಡಿಮೆ ಇರದ ಬಾಯ್ಲರುಗಳಲ್ಲಿ ಕನಿಷ್ಠ ಎರಡು ವರ್ಷದ ಅವಧಿಗೆ ಅವುಗಳ ನಿರ್ವಹಣೆ ಮತ್ತು ಚಾಲನೆಯಲ್ಲಿ ಇಂಜಿನಿಯರ್ ಅಥವಾ ಸಹಾಯಕ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿದ ಅನುಭವ ಹೊಂದಿರಬೇಕು.

ಪರೀಕ್ಷೆಗೆ ಕುಳಿತುಕೊಳ್ಳುವ ಅಭ್ಯರ್ಥಿಗಳು ಪರೀಕ್ಷಾ ಶುಲ್ಕ ರೂ. 150.00 ನ್ನು ಡಿ.ಡಿ. ಅಥವಾ ಪೇ ಆರ್ಡರ್ ಅಥವಾ ಚಲನ್ ಮುಖಾಂತರ ಸಂದಾಯ ಮಾಡಬಹುದು, ಡಿ.ಡಿ. ಅಥವಾ ಪೇ ಆರ್ಡರ್ ಅನ್ನು ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಕರ್ನಾಟಕದಲ್ಲಿ, ಬೆಂಗಳೂರು ಅವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆಯತಕ್ಕದ್ದು. ಚಲನ್ ಮುಖಾಂತರ ಪರೀಕ್ಷಾ ಶುಲ್ಕವನ್ನು ಸಂದಾಯ ಮಾಡಿದಲ್ಲಿ "0230 ಕಾರ್ಮಿಕ ಮತ್ತು ಉದ್ಯೋಗ 103 ಸ್ಟೀಮ್ ಬಾಯ್ಲರುಗಳ ಪರಿವೀಕ್ಷಣಾ ಶುಲ್ಕ" ಲೆಕ್ಕ ಶೀರ್ಷಿಕೆಯಲ್ಲಿ ಜಮೆ ಮಾಡತಕ್ಕದ್ದು. ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯಿಂದ ಪಡೆಯಬಹುದು.

ಭರ್ತಿ ಮಾಡಿದ ಅರ್ಜಿಗಳನ್ನು, ಈ ಕಛೇರಿಯಲ್ಲಿ ಸ್ವೀಕರಿಸುವ ಕೊನೆಯ ದಿನಾಂಕ: 16.10.2004 ಇರುವುದು ಅನಂತರ ತಲುಪಿದ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ.

ಕಾರ್ಯದರ್ಶಿ, ಬಾಯ್ಲರುಗಳ ಆಪರೇಷನ್ ಇಂಜಿನಿಯರ್
ಪಿ.ಆರ್. 1332 ಪರೀಕ್ಷಾ ಮಂಡಳಿ, ಬೆಂಗಳೂರು.

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿ

**ವಿಷಯ:** ಶ್ರೀ ರಾಜೇಶ್ ರೇಷ್ಮೆ ಪ್ರವರ್ತಕರು, ರೇಷ್ಮೆ ಬಿತ್ತನೆ ಕೋಠಿ, ಕುದೂರು ಇವರ ವಿರುದ್ಧ ಶಿಸ್ತು ಕ್ರಮ.

**ಉಲ್ಲೇಖ**
1) ರೇಷ್ಮೆ ಜಂಟಿ ನಿರ್ದೇಶಕರು, ಬಿಳಿದೇವಾಲಯ ಇವರ ಪತ್ರದ ಸಂಖ್ಯೆ: ರೇಜಂನಿ:ಬಿದೇ:ಅಗೈಹಾ:02:2001-02, ದಿನಾಂಕ: 7.11.2003.
2) ತಿಳುವಳಿಕೆ ಪತ್ರದ ಸಂಖ್ಯೆ: ಸಿ3:ಶಿಸ್ತು:ರೇಪ್ರವ:13:2003-04, ದಿನಾಂಕ: 13.01.2004.
3) ಆದೇಶ ಸಂಖ್ಯೆ: ಸಿ3:ಶಿಸ್ತು:ರೇಪ್ರವ:13:03-04, ದಿನಾಂಕ: 13.1.2004.
4) ರೇಷ್ಮೆ ಸಹಾಯಕ ನಿರ್ದೇಶಕರು, ಕುಣಿಗಲ್ ರವರ ಪತ್ರದ ಸಂಖ್ಯೆ: ಸನಿಕು-ಸಿ. ಶಿಸ್ತು:ವಿಚಾ:01: 2003-04, ದಿನಾಂಕ: 9.7.2004.
5) ತಿಳುವಳಿಕೆ ಪತ್ರದ ಸಂಖ್ಯೆ: ಸಿ3:ಶಿಸ್ತು:ರೇಪ್ರವ:13: 2003-04, ದಿನಾಂಕ: 28.7.2004.

**ಪೀಠಿಕೆ:-**

ರೇಷ್ಮೆ ಬಿತ್ತನೆ ಕೋಠಿ, ಕುದೂರು ಇಲ್ಲಿ ರೇಷ್ಮೆ ಪ್ರವರ್ತಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ರಾಜೇಶ್ ಇವರು ದಿನಾಂಕ: 24.6.1999 ರಿಂದ ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಿಯಾಗಿ ಸರ್ಕಾರಿ ಕೆಲಸಕ್ಕೆ ತೊಂದರೆ ಉಂಟು ಮಾಡಿ ಹಾಗೂ ಸರ್ಕಾರಿ ನೌಕರನಿಗೆ ಸಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ರೇಷ್ಮೆ ವಿಸ್ತರಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ, ಕುದೂರು ಇವರು ದಿನಾಂಕ: 2.8.99, 11.10.99, 18.7.2002, 30.9.2002, 18.10.2002 ಮತ್ತು 18.7.2003 ರಂದು ಜ್ಞಾಪನ, ಕಾರಣ ಕೇಳಿ ಪತ್ರ ಜಾರಿ ಮಾಡಿ ಕೆಲಸಕ್ಕೆ ಹಾಜರಾಗಲು ಸೂಚಿಸಿರುತ್ತಾರೆ. ಇವುಗಳಲ್ಲಿ ಕೆಲವು ಪತ್ರಗಳನ್ನು ಶ್ರೀ ರಾಜೇಶ್, ರೇಷ್ಮೆ ಪ್ರವರ್ತಕರು ಇವರು ಸ್ವೀಕರಿಸಿದರೂ ಕೆಲಸಕ್ಕೆ ಮಾತ್ರ ಹಾಜರಾಗಿರುವುದಿಲ್ಲ. ಹಾಗೂ ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲ. ಇವರ ಕರ್ತವ್ಯ ಲೋಪವನ್ನು ಹಾಗೂ ಸರ್ಕಾರಿ ಕೆಲಸದಲ್ಲಿ ಬೇಜವಾಬ್ದಾರಿಯನ್ನು ಗಮನಿಸಿ ಇವರ ಗೈರುಹಾಜರಿ ಬಗ್ಗೆ ಉಲ್ಲೇಖ (1)ರ ಪತ್ರದಲ್ಲಿ ರೇಷ್ಮೆ ಜಂಟಿ ನಿರ್ದೇಶಕರು, ಬಿಳಿದೇವಾಲಯ ಇವರು ಶಿಸ್ತುಪ್ರಾಧಿಕಾರಿಗೆ ಎಲ್ಲಾ ದಾಖಲೆಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿ ಶಿಸ್ತುಕ್ರಮ ಜರುಗಿಸಲು ಕೋರಿರುತ್ತಾರೆ.

ಶ್ರೀ ರಾಜೇಶ್ ಇವರು ಕಛೇರಿ ಕೆಲಸಕ್ಕೆ ದೀರ್ಘ ಅವಧಿಯಿಂದ ಗೈರುಹಾಜರಿಯಾಗಿ ಸರ್ಕಾರಿ ಕೆಲಸಕ್ಕೆ ತೊಂದರೆ ಉಂಟು ಮಾಡಿರುವ ಇವರ ವಿರುದ್ಧದ ಆರೋಪವನ್ನು ಗಮನಿಸಿ ಉಲ್ಲೇಖ (2) ರಂತೆ ಇವರಿಗೆ ಸಿ.ಸಿ.ಎ. ನಿಯಮ 11 ರಡಿಯಲ್ಲಿ ತಿಳುವಳಿಕೆ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಲಾಯಿತು. ಆದರೆ ಆರೋಪಿತ ನೌಕರರು ತಮ್ಮ ಮೇಲಿನ ಆರೋಪದ ಕುರಿತು ನಿಗದಿತ ಅವಧಿಯಲ್ಲಿ ಯಾವುದೇ ಹೇಳಿಕೆಯನ್ನು ಆರೋಪವನ್ನು ಒಪ್ಪುವುದಾಗಲೀ ಅಥವಾ ನಿರಾಕರಿಸುವ ಕುರಿತು ನೀಡಿರುವುದಿಲ್ಲ. ಇದರಿಂದ ಆರೋಪದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ಉಲ್ಲೇಖ (3) ರಲ್ಲಿ ವಿಚಾರಣಾಧಿಕಾರಿಯವರನ್ನು ನೇಮಿಸಿ ಕೂಲಂಕುಷವಾಗಿ ವಿಚಾರಣೆ ನಡೆಸಲು ಆದೇಶಿಸಲಾಯಿತು. ವಿಚಾರಣಾಧಿಕಾರಿಗಳು ಶ್ರೀ ರಾಜೇಶ್, ರೇಷ್ಮೆ ಪ್ರವರ್ತಕರು ಇವರ ಅನಧಿಕೃತ ಗೈರುಹಾಜರಿ ಕುರಿತಂತೆ ವಿಚಾರಣೆ ನಡೆಸಿರುತ್ತಾರೆ. ವಿಚಾರಣೆಗೂ ಈ ನೌಕರರು ಗೈರು ಹಾಜರಿಯಾಗಿರುವುದರಿಂದ ವಿಚಾರಣೆಯನ್ನು ಸಿ.ಸಿ.ಎ. ನಿಯಮ 11(20) ರಲ್ಲಿ ನಿರ್ದಿಷ್ಟಪಡಿಸಿರುವ ನಿಯಮಗಳನ್ನು ಆಧರಿಸಿ ವಿಚಾರಣೆ ನಡೆಸಲಾಗಿದೆ. ಹಾಗೂ ಉಲ್ಲೇಖ (4) ರಂತೆ ಶಿಸ್ತು ಪ್ರಾಧಿಕಾರಕ್ಕೆ ವರದಿ ಒಪ್ಪಿಸಿರುತ್ತಾರೆ. ವಿಚಾರಣೆಯಲ್ಲಿ ಇವರ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ವಿಚಾರಣಾಧಿಕಾರಿಯ ನಿರ್ಣಯವನ್ನು ಶ್ರೀ ರಾಜೇಶ್, ರೇಷ್ಮೆ ಪ್ರವರ್ತಕರು ಇವರಿಗೆ ಜಾರಿ ಮಾಡಿ ಈ ನಿರ್ಣಯದಿಂದ ಮೇಲೆ ಲಿಖಿತ ಹೇಳಿಕೆ ಇದ್ದಲ್ಲಿ ಅದನ್ನು

ದಾಖಲೆಗಳೊಂದಿಗೆ ನೀಡಲು ತಿಳಿಸಲಾಯಿತು. ಆದರೆ ನೌಕರರು ಈ ಅಂಚೆಯನ್ನು ಸ್ವೀಕರಿಸಿರುವುದಿಲ್ಲ. ವಿಳಾಸದಾರರು ಊರು ಬಿಟ್ಟು ಹೋಗಿರುತ್ತಾರೆಂಬ ಷರಾದೊಂದಿಗೆ ಅಂಚೆ ವಾಪಸ್ಸು ಬಂದಿರುತ್ತದೆ. ಇಲ್ಲಿ ಕೂಡ ಈ ನೌಕರರು ಸರ್ಕಾರಿ ಕೆಲಸದಲ್ಲಿ ಬೇಜವಾಬ್ದಾರಿ ತೋರಿರುತ್ತಾರೆ.

ಶಿಸ್ತು ಪ್ರಾಧಿಕಾರವು ಶ್ರೀ ರಾಜೇಶ್, ರೇಷ್ಮೆ ಪ್ರವರ್ತಕರು ಇವರ ಅನಧಿಕೃತ ಗೈರು ಹಾಜರಿಯ ವಿಚಾರಣೆಯನ್ನು ಗಮನಿಸಿದೆ. ಸದರಿಯವರು ದಿನಾಂಕ: 24.6.99 ರಿಂದ ಕಛೇರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಿಯಾಗಿದ್ದಿನಿಂದ ರೇಷ್ಮೆ ವಿಸ್ತರಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ, ಕುದೂರು ಕೆಲಸಕ್ಕೆ ಹಾಜರಾಗಲು ಹಲವು ಜ್ಞಾಪನ ಮತ್ತು ಕಾರಣ ಕೇಳಿ ನೋಟೀಸು ನೀಡಿರುತ್ತಾರೆ. ಆದರೆ ನೌಕರರು ಯಾವುದಕ್ಕೂ ಸ್ಪಂದಿಸಿರುವುದಿಲ್ಲ. ಶಿಸ್ತು ಪ್ರಾಧಿಕಾರವು ಕಳುಹಿಸಿರುವ ಆರೋಪ ಪಟ್ಟಿಯ ಮೇಲೂ ಈ ನೌಕರರು ಯಾವುದೇ ಲಿಖಿತ ಹೇಳಿಕೆ ನೀಡಿರುವುದಿಲ್ಲ. ಇಲಾಖಾ ವಿಚಾರಣೆ ಸಂಬಂಧ ವಿಚಾರಣಾಧಿಕಾರಿಗಳು ವಿಚಾರಣೆಗೆ ಹಾಜರಾಗಲು 6 ಪತ್ರಗಳನ್ನು ಕಳುಹಿಸಿದ್ದರೂ ಶ್ರೀ ರಾಜೇಶ್ ಸ್ಪಂದಿಸದೆ ಮೌನ ತಾಳಿರುವುದನ್ನು ಗಮನಿಸಿ, ಇದರಿಂದ ವಿಚಾರಣೆಯು ಸಿ.ಸಿ.ಎ. ನಿಯಮ 11(20) ರಡಿಯಲ್ಲಿ ನಡೆಸುವ ಅನಿವಾರ್ಯತೆ ಉಂಟಾಗಿರುತ್ತದೆ. ವಿಚಾರಣೆಗೆ ಹಾಜರಾದ ಎಲ್ಲಾ ಸಾಕ್ಷಿದಾರರು ಇವರ ಅನಧಿಕೃತ ಗೈರು ಹಾಜರಿಯನ್ನು ಖಚಿತಪಡಿಸಿರುತ್ತಾರೆ. ವಿಚಾರಣೆಯಲ್ಲಿ ಪರೀಕ್ಷಿಸಲ್ಪಟ್ಟ ದಾಖಲೆಗಳಾದ ಕಛೇರಿಯ ಹಾಜರಾತಿ ಪುಸ್ತಕ, ಜ್ಞಾಪನ, ಕಾರಣ ಕೇಳಿ ತಿಳುವಳಿಕೆ ಪತ್ರ ಹಾಗೂ ಜಾರಿಯಾಗದೇ ಬಂದಿರುವ ನೋಂದಾಯಿತ ಅಂಚೆಗಳು ಇವರ ಗೈರುಹಾಜರಿಯನ್ನು ದೃಢಪಡಿಸುತ್ತದೆ. ಶ್ರೀ ರಾಜೇಶ್, ರೇಷ್ಮೆ ಪ್ರವರ್ತಕರು ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರನಾಗಿದ್ದು, ಸರ್ಕಾರಿ ಕೆಲಸದಲ್ಲಿ ಸಂಪೂರ್ಣ ಬೇಜವಾಬ್ದಾರಿ ತೋರಿಸಿರುತ್ತಾರೆ. ಇವರಿಗೆ ಸರ್ಕಾರಿ ಕೆಲಸದಲ್ಲಿ ಯಾವುದೇ ಆಸಕ್ತಿ ನಿಷ್ಠೆ ಮತ್ತು ಪ್ರಾಮಾಣಿಕತೆ ಇಲ್ಲದಿರುವುದು ದೃಢಪಡುವುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಸಿ3.ಶಿಸ್ತು:ರೇಪ್ರವ:13:03-04, ಬೆಂಗಳೂರು ದಿನಾಂಕ: 6ನೇ ಸೆಪ್ಟೆಂಬರ್ 2004**

ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಅರವಿಂದ ಜಿನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು : ಶಿಸ್ತು ಪ್ರಾಧಿಕಾರಿಯಾದ ನಾನು, ಸದರಿ ನಿಯಮ 8(viii) ರಡಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಶ್ರೀ ರಾಜೇಶ್, ರೇಷ್ಮೆ ಪ್ರವರ್ತಕರು ರೇಷ್ಮೆ ಬಿತ್ತನೆ ಕೋಠಿ ಕುದೂರು ಅವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು,
ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 1333

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಕಾರ್ಯಾಲಯ**
**ಸಂಖ್ಯೆ: ಡಿಆರ್‌ಬಿ-1/ಸಮಾಪನೆ/13/2004-05, ದಿನಾಂಕ: 31ನೇ ಆಗಸ್ಟ್ 2004**

**ವಿಷಯ:** ಅಂಜನಾದ್ರಿ ಪತ್ತಿನ ಸಹಕಾರ ಸಂಘ ನಿ., ಮಾಗಡಿ ಮುಖ್ಯ ರಸ್ತೆ, ವಿಶ್ವನೀಡಂ ಅಂಚೆ, ಬೆಂಗಳೂರು ಇದರ ಸಮಾಪನೆಗೆ ಪ್ರಸ್ತಾವನೆ ಸಲ್ಲಿಸುವ ಬಗ್ಗೆ.

**ಉಲ್ಲೇಖ** 1) ಸ.ಸಂ. ಸಹಾಯಕ ನಿಬಂಧಕರು, 1ನೇ ವಲಯ, ಇವರ ಪತ್ರ ಸಂಖ್ಯೆ: ಸನಿ44/ಸಮಾಪನೆ/7/ 2004-05, ದಿ: 7.7.2004.

2) ಸ.ಸಂ. ನಿರೀಕ್ಷಕರು, ದಕ್ಷಿಣ-1 ಇವರ ಪತ್ರ ದಿನಾಂಕ: 17.6.2004.

ಅಂಜನಾದ್ರಿ ಪತ್ತಿನ ಸಹಕಾರ ಸಂಘ ನಿ., ಮಾಗಡಿ ಮುಖ್ಯರಸ್ತೆ, ವಿಶ್ವನೀಡಂ ಅಂಚೆ, ಬೆಂಗಳೂರು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಸನಿ44/ನೋಂದಣಿ/26367/2000-01 ದಿನಾಂಕ: 2.12.2002 ರಂದು ನಂ. 2, ಅಂಜನಾ ನಗರ, ಮಾಗಡಿ ಮುಖ್ಯ ರಸ್ತೆ, ವಿಶ್ವನೀಡಂ ಅಂಚೆ, ಬೆಂಗಳೂರು-91 ಈ ವಿಳಾಸದಲ್ಲಿ ನೋಂದಾಯಿಸಿದ್ದು, ಇದರ ಪ್ರಥಮ ಸರ್ವಸದಸ್ಯರ ಸಭೆ ದಿನಾಂಕ: 2.1.2003 ರಂದು ಜರುಗಿದ್ದು, ನೂತನ ಆಡಳಿತ ಮಂಡಳಿ ಸದಸ್ಯರ ಆಯ್ಕೆ ಸಹ ನಡೆದಿದ್ದು, ದಿನಾಂಕ: 9.1.2001 ರಂದು ಪದಾಧಿಕಾರಿಗಳ ಆಯ್ಕೆಯಾಗಿರುತ್ತದೆ. ಈ ಸಂಘವು ಮೇಲ್ಕಂಡ ವಿಳಾಸದಲ್ಲಿ ಕಾರ್ಯನಿರ್ವಹಿಸಲಾಗುತ್ತಿತ್ತೆಂದು, ತದನಂತರ ಯಾವುದೇ ಕಾರ್ಯಚಟುವಟಿಕೆ ನಡೆಸದೆ, ಸ್ಥಗಿತಗೊಂಡು ಸಂಘದ ಬಾಗಿಲನ್ನು ತೆರೆಯದೆ ಇರುವುದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದರಿಂದ ಸದಸ್ಯರಿಗಾಗಲೀ, ಸಂಘಕ್ಕಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಉಲ್ಲೇಖ (1)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ವರದಿ ಮಾಡುತ್ತಾ ಈ ಸಂಘವನ್ನು ಸಮಾಪನೆಗೊಳಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಉಲ್ಲೇಖ (2) ರಲ್ಲೂ ಸಹ ಸಹಕಾರ ಸಂಘಗಳ ನಿರೀಕ್ಷಕರು ಈ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ. ಅಲ್ಲದೆ ಈ ಸಂಘದ ವಿಳಾಸಕ್ಕೆ ಹಲವಾರು ಬಾರಿ ಭೇಟಿ ನೀಡಲಾಗಿ ಬಾಗಿಲು ಮುಚ್ಚಿರುವುದು. ಈ ಸಂಘದ ಅಧ್ಯಕ್ಷರು, ನಿರ್ದೇಶಕರುಗಳು ಲಭ್ಯವಿಲ್ಲದೆ ಇದ್ದು ಇವರುಗಳ ವಿಳಾಸಗಳು ಸಹ ಲಭ್ಯವಿಲ್ಲವೆಂದು ತಿಳಿಸಿರುತ್ತಾರೆ.

ಮೇಲಿನ ಶಿಫಾರಸ್ಸಿನಂತೆ ಈ ಸಂಘವು ಅಸ್ಥಿತ್ವವನ್ನು ಕಳೆದುಕೊಂಡು ನಿಷ್ಕ್ರಿಯಗೊಂಡಿರುವುದಾಗಿ ತಿಳಿದುಬಂದಿರುವುದರಿಂದ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಡಲಾಗಿದೆ. ಈ ಸಂಘದ ಆಡಳಿತ ಮಂಡಳಿ ಸದಸ್ಯರ ಮತ್ತು ಪದಾಧಿಕಾರಿಗಳ ವಿಳಾಸಗಳು ಲಭ್ಯವಿಲ್ಲದೇ ಇರುವ ಕಾರಣ ಕಲಂ 72(1) ರಡಿ ನೋಟಿಸ್ ಜಾರಿಗೊಳಿಸಿ ಅಭಿಪ್ರಾಯ ಪಡೆಯಲು ಸಾಧ್ಯವಾಗುತ್ತಿಲ್ಲ.

ಈ ಸಂಘವು ಸರ್ಕಾರದಿಂದಾಗಲೀ, ಇನ್ನಾವುದೇ ಬ್ಯಾಂಕುಗಳಿಂದಾಗಲೀ ಆರ್ಥಿಕ ಸೌಲಭ್ಯವನ್ನು ಪಡೆದುಕೊಂಡಿರುವುದು ಕಂಡುಬಂದಿಲ್ಲ.

ಮೇಲೆ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸಹಕಾರ ಸಂಘಗಳ ಕಾಯಿದೆ 72(1) ರನ್ವಯ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯಕ್ಕೆ ಬಂದು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(1) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಂಡಬ್ಲ್ಯೂ:69:ಸಿಎಲ್ಎಂ:2001 ದಿನಾಂಕ: 21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ. ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಮೇಲೆ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅಂಜನಾದ್ರಿ ಪತ್ತಿನ ಸಹಕಾರ ಸಂಘ ನಿ., ಮಾಗಡಿ ಮುಖ್ಯ ರಸ್ತೆ, ವಿಶ್ವನೀಡಂ ಅಂಚೆ, ಬೆಂಗಳೂರು-91 ಇದನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 73 ರ ರೀತ್ಯಾ ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರವರ ಕಛೇರಿ, ಒಂದನೇ ವಲಯ, ಬೆಂಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯಿದೆ ಕಲಂ 74 ರ ರೀತ್ಯಾ ಕ್ರಮ ಕೈಗೊಂಡು ವರದಿ ಸಲ್ಲಿಸುವುದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 31.7.2004 ರಂದು ಹೊರಡಿಸಲಾಗಿದೆ.

ಪಿ.ಆರ್. 1334 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:398:ಡಿಟಿಸಿಆರ್: 1997-98, ದಿನಾಂಕ: 1ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ವಿರುದ್ಧ** | **ಆರೋಪಿಗಳು:** |
|---|---|---|
| ಪೊಲೀಸ್ ಉಪ ನಿರೀಕ್ಷಕರು, ಕಾನೂನು ಮತ್ತು ಸುವ್ಯವಸ್ಥೆ, ಬಂಟ್ವಾಳ ಪೊಲೀಸ್ ಠಾಣೆ, ಬಂಟ್ವಾಳ | | 1) ಮಹಮ್ಮದ್ ಸುಲೇಮಾನ್ (ಪ್ರಾಯ 35 ವರ್ಷ) ಬಿನ್ ಚೆಯ್ಯಬ್ಬ, ವಾಸ: ಪಾಡಿ ಮನೆ, ಮಾರಿಪಳ್ಳ ಬಂಟ್ವಾಳ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 10.1.1998 ರಂದು ಸಂಜೆ 7.00 ಗಂಟೆಗೆ ಬಂಟ್ವಾಳ ಪೊಲೀಸ್ ಉಪ ನಿರೀಕ್ಷಕರು ಹಾಗೂ ತಮ್ಮ ಸಿಬ್ಬಂದಿಯೊಂದಿಗೆ ಪಾಣೆ ಮಂಗಳೂರು ಸೇತುವೆ ಪಶ್ಚಿಮ ಬದಿಯಲ್ಲಿ ಕಾಯುತ್ತಿರುವಾಗ ಮಂಗಳೂರು ಕಡೆಯಿಂದ ಒಂದು ಅಂಬಾಸಿಡರ್ ಕಾರು ಸಂಖ್ಯೆ: ಎಂವೈಜಿ-8649 ನ್ನು ತಡೆದು ನಿಲ್ಲಿಸಿ ತಪಾಸಣೆ ನಡೆಸಿದಾಗ ಸದ್ರಿ ವಾಹನದಲ್ಲಿ ಚಾಲಕ ಮಾತ್ರ ಇದ್ದು, ಕಾರಿನ ಒಳಗಡೆ ಹಿಂದಿನ ಸೀಟಿನಲ್ಲಿ, ಎದುರು ಸೀಟಿನಲ್ಲಿ ಮತ್ತು ಡಿಕ್ಕಿಯಲ್ಲಿ ಕ್ರಮವಾಗಿ 8, 3 ಮತ್ತು 9 ರಟ್ಟಿನ ಪೆಟ್ಟಿಗೆಗಳು ಇದ್ದವು. ಇದರ ಹೊರಗಡೆ "ಎ.ಜೆ. ಫೆನ್ನಿ" ಮ್ಯಾನ್ಯುಫ್ಯಾಕ್ಚರ್ಡ್ ಬೈ ಪ್ರಶಾಂತ್ ಡಿಸ್ಟಿಲರೀಸ್, ಬೈಕಂಪಾಡಿ ಎಂದು ಬರೆದಿದ್ದು, ಈ ಕುರಿತು ಚಾಲಕನಲ್ಲಿ ವಿಚಾರಿಸಿದಾಗ ಸದ್ರಿ ಪೆಟ್ಟಿಗೆಗಳಲ್ಲಿ ಕೋಕೊನೆಟ್ ಫೆನ್ನಿ ತುಂಬಿರುವ ಬಾಟ್ಲಿಗಳು ಇರುವುದಾಗಿ ತಿಳಿಸಿದನು. ಸದ್ರಿ ವಾಹನದಲ್ಲಿ ಫೆನ್ನಿ ಬಾಟ್ಲಿಗಳನ್ನು ಸಾಗಾಟ ಮಾಡಲು ಯಾವುದೇ ಪರವಾನಿಗೆ ಪತ್ರ ಇಲ್ಲವೆಂದು ತಿಳಿಸಿದನು. ನಂತರ ಚಾಲಕನ ಹೆಸರು, ವಿಳಾಸ ಕೇಳಲಾಗಿ ಚಾಲಕನು ತನ್ನ ಹೆಸರು ಮಹಮ್ಮದ್ ಸುಲೇಮಾನ್ (ಪ್ರಾಯ 35 ವರ್ಷ), ಬಿನ್ ಚೆಯ್ಯಬ್ಬ, ವಾಸ: ಪಾಡಿ ಮನೆ, ಮಾರಿಪಳ್ಳ, ಪುದು ಗ್ರಾಮ, ಬಂಟ್ವಾಳ ತಾಲ್ಲೂಕು ಎಂದು ತಿಳಿಸಿದನು. ಕಾರಿನಲ್ಲಿದ್ದ ಫೆನ್ನಿ ಬಾಟ್ಲಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲು ಸಾಧ್ಯವಾಗದ ಕಾರಣ ಹಾಗೂ ಇತರ ವಾಹನಗಳಿಗೆ ಸಂಚರಿಸಲು ಅನುಕೂಲವಾಗುವ ರೀತಿಯಲ್ಲಿ ಮೇಲೆ ಹೇಳಿದ ಕಾರು ಮತ್ತು ಸೊತ್ತುಗಳನ್ನು ಸಿಬ್ಬಂದಿಯೊಂದಿಗೆ ಸಂಜೆ 7.30 ಗಂಟೆಗೆ ಬಂಟ್ವಾಳ ಠಾಣೆಗೆ ತಂದು, ಠಾಣೆಯಲ್ಲಿ ಕಾರಿನಲ್ಲಿದ್ದ ಎಲ್ಲಾ 20 ಪೆಟ್ಟಿಗೆಗಳನ್ನು ಪರಿಶೀಲಿಸಲಾಗಿ ಅದರಲ್ಲಿ 750 ಎಂ.ಎಲ್.ನ 12 ಬಾಟ್ಲಿಗಳ 4 ಪೆಟ್ಟಿಗೆ 375 ಎಂ.ಎಲ್.ನ 24 ಬಾಟ್ಲಿಗಳ 2 ಪೆಟ್ಟಿಗೆ ಮತ್ತು 180 ಎಂಎಲ್‌ನ ತಲಾ 48 ಬಾಟಲುಗಳ 14 ಪೆಟ್ಟಿಗೆ ಒಟ್ಟು 20 ರಟ್ಟಿನ ಪೆಟ್ಟಿಗೆಗಳಲ್ಲಿರುವುದು ಕಂಡು ಬಂತು. ಸದ್ರಿ ಬಾಟ್ಲಿಗಳ ಮೇಲೆ ಅಬಕಾರಿ ಇಲಾಖೆಯ ಲೇಬಲ್ ಅಂಟಿಸಿರುವುದಿಲ್ಲ. ಫೆನ್ನಿ ಬಾಟ್ಲಿಗಳು ಅಬಕಾರಿ ಇಲಾಖೆಗೆ ಕಟ್ಟಬೇಕಾದ ತೆರಿಗೆಯನ್ನು ಪಾವತಿಸದೆ ಯಾವುದೇ ದಾಖಲೆ ಪತ್ರಗಳು ಇಲ್ಲದೆ ಕಳ್ಳ ಸಾಗಾಣಿಕೆಗೆ ಕೊಂಡು ಹೋಗಿರುವುದು ಖಚಿತವಾದದು ಎಂದು ಕಂಡು ಬಂದಿರುವುದರಿಂದ ಸ್ಯಾಂಪಲ್ ಬಗ್ಗೆ 750 ಎಂ.ಎಲ್.ನ 1 ಬಾಟ್ಲಿ 375 ಎಂ.ಎಲ್.ನ 1 ಬಾಟ್ಲಿ ಮತ್ತು 180 ಎಂ.ಎಲ್.ನ 1 ಬಾಟ್ಲಿ ಪ್ರತ್ಯೇಕವಾಗಿ ತೆಗೆದಿರಿಸಿ ಎಲ್ಲಾ ಫೆನ್ನಿ ಬಾಟ್ಲಿಗಳನ್ನು ಮತ್ತು ಅದನ್ನು ಕೊಂಡೊಯ್ಯುತ್ತಿದ್ದ ಬಿಳಿ ಬಣ್ಣದ ಅಂಬಾಸಿಡರ್ ಕಾರು ಸಂಖ್ಯೆ: ಎಂವೈಜಿ-8649 ನ್ನು ರಾತ್ರಿ 7.45 ಗಂಟೆಯಿಂದ ಮಹಜರು ಮೂಲಕ ವಶಪಡಿಸಿಕೊಂಡು ಠಾಣೆಯಲ್ಲಿ ಅಪರಾಧ ಸಂಖ್ಯೆ: 6/98 ರಲ್ಲಿ ಪ್ರಕರಣವನ್ನು ನೋಂದಾಯಿಸಿ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಮತ್ತು ಪ್ರತಿಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲಾಗಿದೆ. ಸ್ಥಳದಲ್ಲಿ ಒಂದು ಮಹಜರು ಮತ್ತು ಮಾದರಿ ಸೀಸೆಗಳನ್ನು ತಯಾರಿಸಲಾಗಿದೆ. ನಂತರ ವಶಪಡಿಸಿಕೊಂಡ ಸೊತ್ತುಗಳ ಬಗ್ಗೆ ಅಬಕಾರಿ ಕಾಯಿದೆ ಕಲಂ 43(ಎ) ರಡಿಯಲ್ಲಿ ವರದಿಯನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ. ಜಿಲ್ಲೆ, ಮಂಗಳೂರು ಇವರಿಗೆ ಸಲ್ಲಿಸಲಾಗಿದೆ.

ಸದ್ರಿ ವರದಿಯನ್ನು ಸಲ್ಲಿಸಿದ ನಂತರ ಈ ಕುರಿತು ಕಾರಣ ಕೇಳಿ ನೋಟೀಸನ್ನು ವಾಹನದ ನೋಂದಣಿ ಮಾಲೀಕರಾದ ಶ್ರೀ ರವೀಂದ್ರನಾಥ ಚೌಟ ಇವರಿಗೆ ನೀಡಲಾಗಿದೆ. ಸದ್ರಿ ನೋಟೀಸಿಗೆ ಉತ್ತರವಾಗಿ ನೋಂದಣಿ ಮಾಲೀಕರು ಅರ್ಜಿಯನ್ನು ಸಲ್ಲಿಸಿ, ತಾನು ಸದರಿ ಕಾರಿನ ನೋಂದಣಿ ಮಾಲೀಕನೆಂದು ಹಾಗೂ ತನ್ನ ವಿರುದ್ಧ ಮಾಡಿದ ಆಪಾದನೆಗಳು ಸರಿಯಲ್ಲವೆಂದು ತಿಳಿಸಿರುತ್ತಾನೆ. ತನ್ನ ವಾಹನವನ್ನು ತನ್ನ ಕುಟುಂಬದ ಸದಸ್ಯರಿಗಾಗಿ ಮತ್ತು ತನ್ನ ವಾಹನಕ್ಕೆ ಒಬ್ಬ ಮಹಮ್ಮದ್ ಸುಲೇಮಾನ್ ಎಂಬುವರನ್ನು ಚಾಲಕನಾಗಿ ಇಟ್ಟುಕೊಂಡಿರುವುದಾಗಿ ತಿಳಿಸಿರುತ್ತಾನೆ. ತನ್ನ ಅರ್ಜಿಯಲ್ಲಿ ದಿನಾಂಕ: 10.1.98 ರಂದು 3.00 ಗಂಟೆಗೆ ತನ್ನ ಚಾಲಕನಿಗೆ ವಾಹನದಲ್ಲಿ ತನ್ನ

ಅತ್ತೆಯನ್ನು ಮಾಣಿ ಎಂಬಲ್ಲಿಗೆ ಬಿಟ್ಟು ಬರುವಂತೆ ತಿಳಿಸಿ, ವಾಹನವನ್ನು ಚಾಲಕನಿಗೆ ವಹಿಸಿಕೊಟ್ಟಿದಾಗಿ ಮತ್ತು ವಾಹನವು ವಾಪಸು ಬಾರದೇ ಇದ್ದುದರಿಂದ ಫೋನ್ ಮಾಡಿ ತಿಳಿದುಕೊಳ್ಳಲಾಗಿ ಮತ್ತು ತನ್ನ ವಾಹನವನ್ನು ವಾಪಸು ಕಳುಹಿಸಿಕೊಟ್ಟಿರುವುದಾಗಿ ತಿಳಿದು, ವಾಹನ ಬಾರದೇ ಇದ್ದುದರಿಂದ ಬಿ.ಸಿ. ರೋಡಿನಲ್ಲಿ ವಾಹನದ ಬಗ್ಗೆ ವಿಚಾರಿಸಲಾಗಿ ಕಾರನ್ನು ಬಂಟ್ವಾಳ ಪೊಲೀಸರು ವಶಪಡಿಸಿರುವುದು ಗೊತ್ತಾಯಿತು. ಆದುದರಿಂದ ತಾನು ನಿರ್ದೋಷಿ, ಈ ಕೃತ್ಯದಲ್ಲಿ ತಾನು ಭಾಗಿಯಾಗಿಲ್ಲ ಎಂದು ತಿಳಿಸಿ ಅರ್ಜಿ ಸಲ್ಲಿಸಿರುತ್ತಾನೆ.

ಪ್ರಕರಣದಲ್ಲಿ ವಿಚಾರಣೆಯನ್ನು ಕೈಗೊಂಡು ಅಭಿಯೋಜನೆ ಪರ ಒಂದು ಸಾಕ್ಷಿಯನ್ನು ವಿಚಾರಣೆ ಮಾಡಲಾಗಿದೆ. ವಾಹನದ ಮಾಲೀಕರು ಶ್ರೀ ರವೀಂದ್ರನಾಥ ಚೌಟರವರು ದಿನಾಂಕ: 15.1.98 ರಂದು ಒಂದು ಅರ್ಜಿ ಸಲ್ಲಿಸಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಕೋರಿದ್ದರು. ಸದರಿ ಅರ್ಜಿಯನ್ನು ಪುರಸ್ಕರಿಸಿ ಬ್ಯಾಂಕ್ ಗ್ಯಾರಂಟಿಯನ್ನು ನೀಡಿದಲ್ಲಿ ಸದರಿ ವಾಹನವನ್ನು ಬಿಡುಗಡೆಗೊಳಿಸಲು ಆದೇಶಿಸಲಾಗಿದ್ದು, ಸದರಿ ಆದೇಶದ ವಿರುದ್ಧ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಿ ಬ್ಯಾಂಕ್ ಗ್ಯಾರಂಟಿ ಬದಲು ರೂ. 75,000/- ಇಂಡೆಮ್ನಿಟಿ ಬಾಂಡ್ ಮತ್ತು ಇಬ್ಬರು ಜಾಮೀನುದಾರರನ್ನು ಪಡೆದುಕೊಂಡು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸುವಂತೆ ನ್ಯಾಯಾಲಯದ ಆದೇಶ ಪಡೆದುದರಿಂದ ವಾಹನವನ್ನು ಮಾಲೀಕರಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿದೆ.

**ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶ ಉದ್ಭವಿಸುತ್ತವೆ.**

1. ಪ್ರಕರಣದಲ್ಲಿ ದಿನಾಂಕ: 10.1.98 ರಂದು ಅಂಬಾಸಿಡರ್ ಕಾರು ಸಂಖ್ಯೆ: ಎಂವೈಜಿ-8649 ರಲ್ಲಿ ಯಾವುದೇ ಪರವಾನಿಗೆ ಇಲ್ಲದೆ ಫೆನ್ನಿ ತುಂಬಿದ ರಟ್ಟಿನ ಪೆಟ್ಟಿಗೆಗಳನ್ನು ಸಾಗಾಟ ಮಾಡಲಾಗಿತ್ತು ಎಂಬುದು ಸಾಬೀತಾಗಿದೆಯೇ?
2. ವಾಹನದ ಮಾಲೀಕರು ತನಗೆ ತಿಳಿಯದೆ ವಾಹನವು ಅಕ್ರಮ ಫೆನ್ನಿ ಬಾಟ್ಲಿಗಳನ್ನು ಸಾಗಿಸಲು ಉಪಯೋಗಿಸಲ್ಪಟ್ಟಿತ್ತೇ ಎಂಬುದನ್ನು ಸಾಬೀತುಗೊಳಿಸಿದ್ದಾರೆಯೇ?
3. ಈ ಕುರಿತು ಯಾವ ಆದೇಶ?

ಈ ಪ್ರಕರಣದಲ್ಲಿ ಪಿ.ಡಬ್ಲ್ಯು-1 ರವರು ತನಿಖಾಧಿಕಾರಿಯಾಗಿದ್ದು, ಈ ಪ್ರಾಧಿಕಾರದ ಮುಂದೆ ದಿ: 3.4.2001 ರಂದು ಹೇಳಿಕೆ ನೀಡಿರುತ್ತಾರೆ. ತಮ್ಮ ಹೇಳಿಕೆಯಲ್ಲಿ ದಿ: 17.3.98 ರಂದು ಬಂಟ್ವಾಳ ಪೊಲೀಸು ಉಪ ನಿರೀಕ್ಷಕರವರು ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆ ಪತ್ರಗಳನ್ನು ಮತ್ತು ಜಪ್ತಿ ಮಾಡಿದ ವಾಹನ, ಸೊತ್ತುಗಳನ್ನು ಮುಂದಿನ ನಡವಳಿಕೆ ಬಗ್ಗೆ ಹಾಜರುಪಡಿಸಿರುತ್ತಾರೆ. ದಿ: 19.3.98 ರಂದು ಕಛೇರಿಗೆ ಸಂಬಂಧಪಟ್ಟ ಮಾದರಿ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆ ಸಲುವಾಗಿ ರಾಸಾಯನಿಕ ತಜ್ಞರಿಗೆ ಕಳುಹಿಸಿಕೊಟ್ಟಿರುವುದಾಗಿ ಮತ್ತು ರಾಸಾಯನಿಕ ತಜ್ಞರ ವರದಿಯನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ.

ಈ ಪ್ರಕರಣದ ಪ್ರಮುಖ ಸಾಕ್ಷಿ ಶ್ರೀ ಎ.ಕೆ. ನ್ಯಾಕ್ ಇವರು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುವುದಿಲ್ಲ. ಸದರಿ ಸಾಕ್ಷಿದಾರರಿಗೆ ಈ ಪ್ರಾಧಿಕಾರದಿಂದ ಸಾಕಷ್ಟು ಅವಕಾಶಗಳನ್ನು ನೀಡಿದ್ದಾಗಿಯೂ, ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುವುದಿಲ್ಲ. ಈ ಕಾರಣದಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಈ ಕೃತ್ಯಕ್ಕೆ ವಾಹನ ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ಇತ್ಯರ್ಥಗೊಳಿಸಲು ಸಾಧ್ಯವಾಗಿಲ್ಲ. ಪ್ರಕರಣದ ಇತರ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ಪ್ರಥಮ ವರ್ತಮಾನ ವರದಿಯಲ್ಲಿ ತಿಳಿಸಿದಂತೆ ಕರ್ನಾಟಕ ಅಬಕಾರಿ ಕಾನೂನಡಿಯಲ್ಲಿ ಅಪರಾಧ ಎಸಗಿದ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳು ಲಭ್ಯವಿಲ್ಲವೆಂಬ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಈ ಕಾರಣದಿಂದ ಮೊದಲನೇ ವಿವಾದಾಂಶವನ್ನು ನಕರಾತ್ಮಕವಾಗಿ ತೀರ್ಮಾನಿಸಲಾಗಿದೆ. ಒಂದನೇ ವಿವಾದಾಂಶವನ್ನು ನಕರಾತ್ಮಕವಾಗಿ ತೀರ್ಮಾನಿಸಿದ್ದರಿಂದ ಎರಡನೇ ವಿವಾದಾಂಶದ ಕುರಿತು ಸಾಕ್ಷಿ ಪರಿಶೀಲನೆ ಅವಶ್ಯಕತೆವಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಆರೋಪಣೆಗಳು ಸಿದ್ದಗೊಂಡಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿ ಈ ಕಾರಣದಿಂದ ಈ ಪ್ರಕರಣದಲ್ಲಿ ಜಪ್ತು ಪಡಿಸಿರುವ ಅಂಬಾಸಿಡರ್ ಕಾರು ಸಂಖ್ಯೆ: ಎಂವೈಜಿ: 8649 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳದೇ ಅದರ ಮಾಲೀಕರಿಗೆ ತಾತ್ಕಾಲಿಕವಾಗಿ ಬಿಡುಗಡೆಗೊಳಿಸಿರುವ ವಾಹನವನ್ನು ಆರ್.ಸಿ. ಮಾಲೀಕರ ಪರ ಖಾಯಂಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಗಿನ ಆದೇಶ.

**ಆದೇಶ ನಂ. ಎಸ್‌ಡಿಕೆ:398:ಡಿಟಿಸಿಆರ್:1997-98, ದಿನಾಂಕ: 1ನೇ ಸೆಪ್ಟೆಂಬರ್ 2004**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ನೇ ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43(ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಕಾನೂನು ಮತ್ತು ಸುವ್ಯವಸ್ಥೆ ಬಂಟ್ವಾಳ ಪೊಲೀಸ್ ಠಾಣೆ, ಬಂಟ್ವಾಳ ಇವರ ಮೊಕದ್ದಮೆ ಸಂಖ್ಯೆ: 6/98 ದಿನಾಂಕ: 10.1.98 ರಲ್ಲಿ ಜಪ್ತಿಪಡಿಸಿರುವ ಅಂಬಾಸಿಡರ್ ಕಾರು ಸಂ: ಎಂವೈಜಿ-8649 ನ್ನು ನಿಯಮ 43 ಎ(2) ರ ಅನ್ವಯ ಈ ಪ್ರಾಧಿಕಾರದ ದಿ: 28.5.98 ರ ಆದೇಶದಂತೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಮಾಡಿರುವ ಆದೇಶವನ್ನು ಖಾಯಂಗೊಳಿಸಿ ಸದರಿ ವಾಹನವನ್ನು ಆರ್.ಸಿ. ಮಾಲೀಕರಾದ ಶ್ರೀ ರವೀಂದ್ರನಾಥ ಚೌಟ ಬಿನ್ ಈಶ್ವರ ಚೌಟ, ಗೋರಿಗುಡ್ಡ ಮಂಗಳೂರು ಇವರ ವಶಕ್ಕೆ ಶಾಶ್ವತವಾಗಿ ಬಿಡುಗಡೆ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿ: 1.9.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ, ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1 - ಶ್ರೀ ಎಂ.ಆರ್. ನಾಯರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿದ ಪತ್ರ
ನಿಶಾನೆ ಪಿ-1ಎ - ದೃಢೀಕರಿಸಿದ ಸಹಿ
ನಿಶಾನೆ ಪಿ-2 - ಮಾದರಿ ಮೊಹರಿನ ಪ್ರತಿ
ನಿಶಾನೆ ಪಿ-2ಎ - ದೃಢೀಕರಿಸಿದ ಸಹಿ
ನಿಶಾನೆ ಪಿ-3 - ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ
ನಿಶಾನೆ ಪಿ-3ಎ - ದೃಢೀಕರಿಸಿದ ಸಹಿ

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಪಿ.ಆರ್. 1335 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಹಳಿಯಾಳ ವಿಭಾಗ, ಹಳಿಯಾಳ**

**ಕ್ರ.ಸಂ. ಅ5/ಸಿಬ್ಬಂದಿ/ಗೈರ/2004-05, ದಿನಾಂಕ: ..... ಸೆಪ್ಟೆಂಬರ್ 2004**

**ವಿಷಯ:** ಶ್ರೀಮತಿ ಸತ್ಯವ್ವ ಯಮನಪ್ಪಾ ಹರಿಜನ, ಸ್ಲೀಪರ, ಮರಮುಟ್ಟುಗಳ ಕೋಠಿ, ದಾಂಡೇಲಿ ಇವರು ಅನಧಿಕೃತ ದೀರ್ಘಕಾಲ ಗೈರು ಹಾಜರಿ ಇದ್ದ ಬಗ್ಗೆ.

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಸರಕಾರಿ ಮರಮುಟ್ಟುಗಳ ಕೋಠಿ, ದಾಂಡೇಲಿಯಲ್ಲಿ ಸ್ಲೀಪರ ಅಂತಾ ಕೆಲಸ ನಿರ್ವಹಿಸುತ್ತಿದ್ದು ದಿನಾಂಕ: 6.10.1999 ರಿಂದ ಇಂದಿನವರೆಗೂ ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದಿರಿ. ಅಂಚೆ ಮೂಲಕ ನಿಮಗೆ ಕಳಿಸಿದ ನೋಟಿಸ್ ಮತ್ತು ಇಲಾಖಾ ವಿಚಾರಣೆ ನೋಟಿಸುಗಳು ನಿಮ್ಮ ಅಡ್ರೆಸ್ಸಿಗೆ ಜಾರಿಯಾಗದೇ ಮರಳಿ ಬಂದಿರುತ್ತದೆ.

ನಿಮ್ಮ ಈ ಅಶಿಸ್ತಿನ ವರ್ತನೆಗೆ ಕರ್ನಾಟಕ ನಾಗರಿಕ ಸೇವಾ ನಿಯಮ 1958 ನೇಯ 106ಎ ಮತ್ತು 108ರ ಅನುಸಾರ ನಿಮ್ಮ ಕ್ರಮ ಕೈಕೊಳ್ಳಲಾಗುವುದು ಅನಿವಾರ್ಯವಾಗಿದೆ. ನೀವು ದಿನಾಂಕ: 6.10.1999 ರಿಂದ ಇಂದಿನವರೆಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಉಳಿದಿರುವುದು ಸಾಬೀತಾಗಿದೆ. ಆದ್ದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ/ಸೇಇ/2001, ದಿನಾಂಕ: 14.9.2001 ರ ಅನುಸಾರ ನಿಮ್ಮನ್ನು ಸೇವೆಯಿಂದ ತೆಗೆದುಹಾಕುವುದು ಅನಿವಾರ್ಯವಾಗಿದೆ. ಆದಾಗ್ಯೂ ಮಾನವೀಯ ದೃಷ್ಟಿಯಿಂದ ಹಾಗೂ ಸ್ವಾಭಾವಿಕ ನ್ಯಾಯವನ್ನು ಎತ್ತಿ ಹಿಡಿಯುವ ಸಲುವಾಗಿ ಈ ಮೂಲಕ ನಿಮಗೆ ಅಂತಿಮ ಅವಕಾಶವನ್ನು ನೀಡುತ್ತಾ ಈ ಪ್ರಕಟಣೆ ಪ್ರಕಟಗೊಂಡ 15 ದಿನಗಳಲ್ಲಿ ಕರ್ತವ್ಯಕ್ಕೆ ಹಾಜರಾಗಿ ಯೋಗ್ಯ ಕಾರಣ ನೀಡಬೇಕು ಇದಕ್ಕೆ ತಪ್ಪಿದ್ದಲ್ಲಿ ನಿಮ್ಮನ್ನು ಸೇವೆಯಿಂದ ತೆಗೆದುಹಾಕಲಾಗುವುದು.

**ರಾಮಚಂದ್ರ**
ಪಿ.ಆರ್. 1336 ಉಪ ಅರಣ್ಯ ಸಂರಕ್ಷಣಾಧಿಕಾರಿ,
ಹಳಿಯಾಳ ವಿಭಾಗ, ಹಳಿಯಾಳ.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್**

**ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್ ಸಂಖ್ಯೆ: 861/2001-02, ದಿನಾಂಕ: 7ನೇ ಸೆಪ್ಟೆಂಬರ್ 2004**

**ಕುದುರೆಮುಖ ಪೋ.ಠಾ. ಕ್ರೈಂ ಸಂ. 47/2001, ದಿನಾಂಕ: 22.11.2001**

**ಅಬಕಾರಿ ನಿರೀಕ್ಷಕರು, ಮೂಡಿಗೆರೆ ವಲಯ ಇವರ ಪ್ರ.ವ.ವ. ಸಂಖ್ಯೆ: 9/2001-02 ದಿ: 19.6.2002**

**ಉಪಸ್ಥಿತರು:** ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು:** **ವಿರುದ್ಧ** **ಆಪಾದಿತರು:**
ಆರಕ್ಷಕ ಉಪ ನಿರೀಕ್ಷಕರು, ಎಂ. ಶಂಕರ್ ಬಿನ್ ಮಾರಣ್ಣ ಮತ್ತು ಇತರರು
ಕುದುರೆಮುಖ ಪೊಲೀಸ್ ಠಾಣೆ, ಮೂಡಿಗೆರೆ ತಾಲ್ಲೂಕು

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 22.11.2001 ರಂದು ಆರಕ್ಷಕ ಉಪ ನಿರೀಕ್ಷಕರು, ಕುದುರೆಮುಖ ಪೊಲೀಸ್ ಠಾಣೆ ಇವರು ಲಾರಿಗಳ ಸಂಖ್ಯೆ: ಪಿ.ವೈ. 01.ಎಲ್.6284, ಟಿ.ಎನ್. 27.ಹೆಚ್.3147 ಮತ್ತು ಕೆ.ಎ. 05.ಎ.6809 ಗಳನ್ನು ಅಕ್ರಮ ಮದ್ಯಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನಗಳಲ್ಲಿ ಕ್ರಮವಾಗಿ ಒಟ್ಟು 4249.400 ಲೀ, 5745.600 ಲೀ ಮತ್ತು 4640.400 ಲೀ ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನಗಳಲ್ಲಿದ್ದ ವ್ಯಕ್ತಿಗಳಾದ ಎಂ. ಶಂಕರ್ ಬಿನ್ ಮಾರಣ್ಣ, ಕೆ. ರಮೇಶ್ ಬಿನ್ ವೆಂಕೋಬ, ವಲಿ ಬಿನ್ ಚಾಂದ್‌ಸಾಬ್, ರಂಗನಾಥ್ ಬಿನ್ ಭೀಮಣ್ಣ, ವೆಂಕಟೇಶ್ ಬಿನ್ ಸಿದ್ದೇಗೌಡ

ಮತ್ತು ಉಮೇಶ್ ಬಿನ್ ರಾಮೇಗೌಡ ಇವರುಗಳು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆರಹಿತ ವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನಗಳೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಕ್ರೈಂ ಸಂ. 47/2001 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಮೂಡಿಗೆರೆ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ತನಿಖೆ ಮುಂದುವರೆಸಿ ಪ್ರ.ವ.ವ. ಸಂ. 9/2001-02 ದಿ: 19.6.2002 ರಲ್ಲಿ ಮೊಕದ್ದಮೆಯನ್ನು ದಾಖಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನಗಳು ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಕ್ರಮ ಕೈಗೊಳ್ಳಲಾಯಿತು.

ವಾಹನ ಸಂಖ್ಯೆ: ಕೆಎ.05.ಎ.6809 ಲಾರಿಗೆ ಸಂಬಂಧಿಸಿದಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ರಾಜಾಜಿನಗರ, ಬೆಂಗಳೂರು (ಪಶ್ಚಿಮ) ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಯಾದಗಿರಿ ರಾಜು ಬಿನ್ ದೊಡ್ಡ ರಾಮಣ್ಣ, ನಂ. 38, ಜೇಡರಹಳ್ಳಿ, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10, ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು ಇವರು ವಾಹನಕ್ಕೆ ರೂ. 1,42,250/- (ಒಂದು ಲಕ್ಷದ ನಲವತ್ತೆರಡು ಸಾವಿರದ ಎರಡು ನೂರ ಐವತ್ತು ರೂಪಾಯಿಗಳು ಮಾತ್ರ) ಗಳ ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಯಾದಗಿರಿ ರಾಜು ಬಿನ್ ದೊಡ್ಡ ರಾಮಣ್ಣ, ನಂ. 38, ಜೇಡರಹಳ್ಳಿ, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 ಇವರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮಕೈಕೊಂಡಿದ್ದು ದಿನಾಂಕ; 17.4.2003 ರಂದು ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಶ್ರೀ ಯಾದಗಿರಿ ರಾಜು ಬಿನ್ ದೊಡ್ಡ ರಾಮಣ್ಣ, ನಂ. 38, ಜೇಡರಹಳ್ಳಿ, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10, ಇವರು ವಕೀಲರಾದ ಎನ್. ದೇವೇಂದ್ರ ಕುಮಾರ್, ಚಿಕ್ಕಮಗಳೂರು ಇವರ ಮೂಲಕ ಸದರಿ ಪ್ರಕರಣದಲ್ಲಿ ಜಫ್ತಾಗಿರುವ ವಾಹನವನ್ನು ಇಲಾಖೆಯ ಮೂಲಕ ಇತ್ಯರ್ಥಪಡಿಸಿಕೊಡಬೇಕೆಂದು ದಿನಾಂಕ: 18.9.2003 ರಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಾಹನದ ಮಾಲೀಕರೆಂದು ಹೇಳಲಾದ ಶ್ರೀ ಯಾದಗಿರಿ ರಾಜು ಇವರು ವಕೀಲರ ಮೂಲಕ ಪ್ರಕರಣವನ್ನು ಇಲಾಖಾ ಇತ್ಯರ್ಥ ಅರ್ಜಿ ಸಲ್ಲಿಸಿದ್ದು, ಈವರೆವಿಗೂ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿರುವುದಿಲ್ಲ. ಸದರಿ ವಾಹನದ ಮಾಲೀಕರಿಗೆ ನೋಂದಾಯಿತ ಅಂಚೆ ಮೂಲಕ ನೋಟೀಸ್ ಅನ್ನು ದಿನಾಂಕ: 28.1.2004 ಮತ್ತು 19.4.2004 ರಂದು ಕಳುಹಿಸಿದ್ದು, ಜಾರಿಯಾಗದೆ ಮರಳಿ ಪ್ರಾಧಿಕಾರಕ್ಕೆ ಷರಾದೊಂದಿಗೆ ಬಂದಿರುತ್ತದೆ. ಹಾಗೂ ಅಬಕಾರಿ ಉಪ ನಿರೀಕ್ಷಕರು, ಮೂಡಿಗೆರೆ ಉಪ ವಲಯ ಇವರು ವಾಹನದ ಮಾಲೀಕರು ಈ ವಿಳಾಸದಲ್ಲಿ ವಾಸಿಸಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಾಹನದ ಮಾಲೀಕರ ಪರ ವಕೀಲರಾದ ಶ್ರೀ ಎನ್. ದೇವೇಂದ್ರ ಕುಮಾರ್, ಚಿಕ್ಕಮಗಳೂರು ಇವರು ದಿನಾಂಕ; 10.8.2004 ರಂದು ಪ್ರಾಧಿಕಾರದ ಮುಂದೆ ಈ ಪ್ರಕರಣದಿಂದ ತನ್ನನ್ನು ನಿವೃತ್ತಿಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಮೊಕದ್ದಮೆಯ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ. ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 4249.400 ಲೀಟರ್ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 4246.830 ಲೀಟರ್ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಎರಡು ವರ್ಷ, ಎರಡು ತಿಂಗಳಿಗೂ ಮೇಲ್ಪಟ್ಟಿದ್ದು, ವಾಹನದ ಮಾಲೀಕರಿಗೆ ನೋಟೀಸ್ ಜಾರಿಯಾಗದೇ ಮರಳಿ ಬಂದಿರುತ್ತದೆ. ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಶ್ರೀ ಕೆ. ಭೀಮಪ್ಪ, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ 05 ಎ 6809 (ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ. ಉಳಿದ ಎರಡು ವಾಹನಗಳಾದ ಟಿ.ಎನ್. 27 ಹೆಚ್. 3147 (ಲಾರಿ) ಮತ್ತು ಪಿ.ವೈ. 01 ಎಲ್ 6284 (ಲಾರಿ) ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗಿರುತ್ತದೆ.

ಈ ಆದೇಶವನ್ನು ಇಂದು ಅಂದರೆ 7ನೇ ಸೆಪ್ಟೆಂಬರ್ 2004 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್

ಪಿ.ಆರ್. 1337 ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್**

**ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು, ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್ ಸಂಖ್ಯೆ: 630/2001-02, ದಿನಾಂಕ: 7ನೇ ಸೆಪ್ಟೆಂಬರ್ 2004**

**ಬಸವನಹಳ್ಳಿ ಪೊಲೀಸ್ ಠಾಣೆ ಕ್ರೈಂ ಸಂ. 12/2002, ದಿನಾಂಕ: 8.2.2002**

**ಅಬಕಾರಿ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರ ಪ್ರ.ವ.ವ. ಸಂಖ್ಯೆ: 59/2001-02 ದಿ: 27.2.2002**

**ಉಪಸ್ಥಿತರು:** ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು:** **ವಿರುದ್ಧ** **ಆಪಾದಿತರು:**

ಆರಕ್ಷಕ ಉಪ ನಿರೀಕ್ಷಕರು, ಖಲೀಲ್ ಬಿನ್ ಸಿದ್ದಿಖ್ ಹುಸೇನ್ ಮತ್ತು ಇತರರು

ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 8.2.2002 ರಂದು ಆರಕ್ಷಕ ಉಪ ನಿರೀಕ್ಷಕರು, ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಇವರು ಸಿಬ್ಬಂದಿಯೊಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಚಿಕ್ಕಮಗಳೂರು ನಗರದ ಎ.ಪಿ.ಎಂ.ಸಿ. ಯಾರ್ಡ್ ಹತ್ತಿರದ ಕೆ.ಎಂ. ರಸ್ತೆಯಲ್ಲಿ ಗಸ್ತು ಕಾರ್ಯ ನಿರ್ವಹಿಸುವಾಗ ಲಾರಿ ಸಂಖ್ಯೆ: ಕೆ.ಎ. 07. 969 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 2422.800 ಲೀಟರ್ ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ ಖಲೀಲ್ ಬಿನ್ ಸಿದ್ದಿಖ್ ಹುಸೇನ್ ಮತ್ತು ಮುತ್ತುಕುಮಾರ್ ಬಿನ್ ಅಣ್ಣಾಮಲೈ ಇವರುಗಳು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಠಾಣೆಯ ಕ್ರೈಂ ಸಂಖ್ಯೆ: 12/2002 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಆರೋಪಿಯನ್ನು ದಸ್ತಗಿರಿಗೊಳಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂಖ್ಯೆ 59/2001-02 ದಿ: 27.2.2002 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ತೆರಿಗೆ ರಹಿತ ಭಾರತೀಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆದು ಕ್ರಮಕೈಗೊಳ್ಳಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಜಯನಗರ, ಬೆಂಗಳೂರು (ದಕ್ಷಿಣ) ಇವರಿಂದ ಪಡೆಯಲಾದ ವಾಹನದ "ಬಿ" ಎಕ್ಸ್‌ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಫಯಾಜುಲ್ಲಾ ಬಿನ್ ಜಲೀಲ್ ಖಾನ್, ನಂ. 13/6, 4ನೇ ಕ್ರಾಸ್, ಸಂಗಮೇಶ್ವರ ನಗರ, ಜಯನಗರ, 1ನೇ ಬ್ಲಾಕ್, ಬೆಂಗಳೂರು ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು, ಇವರು ವಾಹನಕ್ಕೆ ರೂ. 70,000/- (ಎಪ್ಪತ್ತು ಸಾವಿರ ರೂಪಾಯಿಗಳು ಮಾತ್ರ) ಗಳ ಬೆಲೆಯನ್ನು ನಿಗದಿಪಡಿಸಿ ವರದಿಯನ್ನು ನೀಡಿರುತ್ತಾರೆ.

ವಾಹನದ ಮಾಲೀಕರಾದ ಶ್ರೀ ಫಯಾಜುಲ್ಲಾ ಬಿನ್ ಜಲೀಲ್ ಖಾನ್, ನಂ. 13/6, 4ನೇ ಕ್ರಾಸ್, ಸಂಗಮೇಶ್ವರ ನಗರ, ಜಯನಗರ, 1ನೇ ಬ್ಲಾಕ್, ಬೆಂಗಳೂರು ಇವರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮಕೈಕೊಂಡಿದ್ದು, ದಿನಾಂಕ: 12.5.2004 ರಂದು ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಬಗ್ಗೆ ಈಗಾಗಲೇ ದಿನಾಂಕ: 25.12.2003 ರಂದು ರಾಜ್ಯ ಪತ್ರಿಕೆಯಾದ ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ವಾಹನಕ್ಕೆ ಸಂಬಂಧಿಸಿದಂತೆ 30 ದಿನಗಳೊಳಗಾಗಿ ವಾಹನದ ಮೇಲೆ ಹಕ್ಕು ಸಾಧಿಸಲು ಸಂಬಂಧಪಟ್ಟ ಅಧಿಕೃತ ದಾಖಲಾತಿಯೊಂದಿಗೆ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಲು ವಾಹನದ ಮಾಲೀಕರಿಗೆ ಅಂತಿಮ ಕಾಲಾವಕಾಶ ನೀಡಲಾಗಿದ್ದು, ಸದರಿ ಅವಧಿಯೊಳಗೆ ಯಾವುದೇ ಮನವಿ ಬಾರದೇ ಇದ್ದಲ್ಲಿ ಏಕ ಪಕ್ಷೀಯವಾಗಿ ನಿರ್ಣಯ ಕೈಗೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ಪ್ರಕಟಣೆಯನ್ನು ಹೊರಡಿಸಲಾಗಿತ್ತು. 30 ದಿನಗಳು ಕಳೆದರೂ ಈವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಹಾಜರಿರುವುದಿಲ್ಲ.

ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 2422.800 ಲೀ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 2421.495 ಲೀಟರ್ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿ ಮೊಕದ್ದಮೆ ದಾಖಲಾಗಿ ಎರಡು ವರ್ಷ ಆರು ತಿಂಗಳಿಗೂ ಮೇಲ್ಪಟ್ಟಿದ್ದು, ವಾಹನದ ಮಾಲೀಕರಿಗೆ ನೋಟೀಸ್ ಜಾರಿಯಾಗದೇ ಮರಳಿ ಬಂದಿದ್ದು ಹಾಗೂ ಪತ್ರಿಕೆ ಪ್ರಕಟಣೆಯಾಗಿದ್ದರೂ ಸಹಾ ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನದ ಮಾಲೀಕರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ.

ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ 07 ಎ 969 (ಲಾರಿ) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 7ನೇ ಸೆಪ್ಟೆಂಬರ್ 2004 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್. 1338

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಜಿಲ್ಲೆ, ಬೆಂದೂರ್‌ವೆಲ್‌ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-32: 2004ಎಫ್, ದಿನಾಂಕ: 9ನೇ ಸೆಪ್ಟೆಂಬರ್ 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಶ್ರೀ ಪೂವಪ್ಪ ಪೂಜಾರಿ ಬಿನ್ ಕೋಟಿ ಪೂಜಾರಿ<br>6:49, ದುರ್ಗಾ ಸದನ ಬಪ್ಪ ತೋಟ, ಕೊಳಚಿ ಕಂಬ್ಲ<br>ಮುಲ್ಕಿ ಮಂಗಳೂರು ತಾಲ್ಲೂಕು<br>ಶ್ರೀಮತಿ ಯಮುನ ಪಿ. ಪೂಜಾರಿ ಕೋಂ. ಪೂವಪ್ಪ<br>ಪೂಜಾರಿ 6:49, ದುರ್ಗಾ ಸದನ, ಬಪ್ಪ ತೋಟ<br>ಕೊಳಚಿಕಂಬ್ಲ, ಮುಲ್ಕಿ ಮಂಗಳೂರು | | 1. ಶ್ರೀ ಹರೀಶ್ ಕರ್ಕೇರಾ ಬಿನ್ ಕರ್ಕೇರಾ,<br>ಸುಮತಿ ನಿವಾಸ ಕೊಳಚಿ ಕಂಬ್ಲ ಮುಲ್ಕಿ,<br>ಮಂಗಳೂರು.<br>2. ದಿ ನ್ಯೂ ಇಂಡಿಯಾ ಅಶ್ಯುರೆನ್ಸ್ ಕಂ. ಲಿ.<br>ಪೂಜಾ ಸಿಂಧಿ ಪಂಚಾಯತ್ ಬಿಲ್ಡಿಂಗ್,<br>1ನೇ ಮಹಡಿ, ಎಂ.ಜಿ. ರಸ್ತೆ, ಪಾನ್‌ವೆಲ್<br>ಮಹಾರಾಷ್ಟ್ರ. |

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಪೂವಪ್ಪ ಪೂಜಾರಿ ಇವರು ತಮ್ಮ ಮಗನಾದ ಶ್ರೀ ದಿನೇಶ ಇವರು 1ನೇ ಪ್ರತಿವಾದಿಗಳಾದ ಶ್ರೀ ಹರೀಶ ಕರ್ಕೇರಾ ಇವರಲ್ಲಿ ಕೆಲಸಗಾರನಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 15.3.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಜಿಲ್ಲೆ, ಮಂಗಳೂರು.

ಪಿ.ಆರ್. 1339

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ ದ.ಕ. ಉಪವಿಭಾಗ, ಬೆಂದೂರ್‌ವೆಲ್, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎಂ:ಪಿಆರ್-33: 2004ಎಫ್, ದಿನಾಂಕ: 9ನೇ ಸೆಪ್ಟೆಂಬರ್ 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| 1. ಶ್ರೀಮತಿ ರತ್ನಾವತಿ (ವಿಧವೆ)<br>2. ನಿಖಿತಾ<br>3. ಶ್ರೀಮತಿ ಕಮಲ ದೇವಾಡಿಗ<br>ಸೈಟ್ ನಂ. 20, ಚಿತ್ರಾಪುರ ಕುಳಾಯಿ ಅಂಚೆ,<br>ಮಂಗಳೂರು. | | ಕಾರ್ಯ ನಿರ್ವಾಹಕ ಇಂಜಿನಿಯರ್ (ವಿದ್ಯುತ್)<br>ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪೆನಿ,<br>ಪೋಸ್ಟ್ ಬಾಕ್ಸ್ ನಂಬರ್ 78, ಮಂಗಳೂರು<br>ವಿಭಾಗ, ಅತ್ತಾವರ, ಮಂಗಳೂರು-1 |

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ರತ್ನಾವತಿ ಇವರು ತಮ್ಮ ಗಂಡನಾದ ಕೆ. ಕರುಣಾಕರ ಇವರು ಪ್ರತಿವಾದಿಗಳಾದ ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ನಿಗಮ ಇವರಲ್ಲಿ ಗ್ಯಾಂಗ್‌ಮೆನ್ ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 31.05.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಹೆಚ್. ಗೋಪಾಲಗೌಡ**

ಪಿ.ಆರ್. 1340

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪವಿಭಾಗ-1, ಮಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಆರ್.ಎಸ್. ಕೊಳ್ಳೂರ, ಪ್ರಥಮ ದರ್ಜೆ ಸಹಾಯಕ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ, ಧಾರವಾಡ ಇವರ ಮೇಲಿನ ಲಂಚ ಸ್ವೀಕಾರ ಪ್ರಕರಣದ ಬಗ್ಗೆ.

**ಉಲ್ಲೇಖ**
1) ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ: ಲೋಕ: ಐಎನ್‌ವಿ:(ಜಿ)ಎಲ್-32: ಸಿಆರ್:19:95, ಡಿಹೆಚ್‌ಆರ್ ದಿನಾಂಕ: 6.7.2004.
2) ನಿರ್ದೇಶನಾಲಯದ ಸಮ ಸಂಖ್ಯೆಯ ಪತ್ರ ದಿ: 19.8.2004.
3) ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ: ಲೋಕ: ಐಎನ್‌ವಿ:(ಜಿ)ಎಲ್-68:ಸಿಆರ್:19:95 ಡಿಹೆಚ್‌ಆರ್ ದಿನಾಂಕ: 8.9.2004.

**ಪ್ರಸ್ತಾವನೆ:-**

ಉಲ್ಲೇಖ (1) ರಲ್ಲಿನ ಪತ್ರದಲ್ಲಿ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಧಾರವಾಡ ಲೋಕಾಯುಕ್ತ ಪೊಲೀಸ್ ಠಾಣೆಯ ಗುನ್ನೆ ಸಂ: 19:95ರ ಆರೋಪಿಯಾದ ಶ್ರೀ ಆರ್.ಎಸ್. ಕೊಳ್ಳೂರ, ಪ್ರಥಮ ದರ್ಜೆ ಸಹಾಯಕ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿ, ಧಾರವಾಡ ಇವರ ಮೇಲಿನ ಟ್ರ್ಯಾಪ್ ಪ್ರಕರಣದಲ್ಲಿ ಧಾರವಾಡ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವು ವಿಶೇಷ ಸಂಖ್ಯೆ: 24:96 ರಲ್ಲಿ ವಿಚಾರಣೆ ನಡೆಸಿ ದಿನಾಂಕ; 10.6.2004 ರಂದು ಆರೋಪಿಗೆ ಲಂಚ ನಿರೋಧ ಕಾಯ್ದೆ ಕಲಂ 7ರ ಕೆಳಗೆ ಅಪರಾಧ ಮಾಡಿದ ಬಗ್ಗೆ ಒಂದು ವರ್ಷ ಕಠಿಣ ಶಿಕ್ಷೆ ಮತ್ತು ರೂ. 5000 ಗಳನ್ನು ದಂಡ ವಿಧಿಸಿ ಆದೇಶ ನೀಡಲಾಗಿದೆಯೆಂದು ತಿಳಿಸಿ ಸದರಿ ಆರೋಪಿಯನ್ನು ನಿಯಮಾವಳಿಯಂತೆ ಸೇವೆಯಿಂದ ವಜಾ ಮಾಡಲು ಕ್ರಮಕೈಗೊಳ್ಳಲು ಕೋರಲಾಗಿತ್ತು.

ಈ ಮಧ್ಯೆ ಆರೋಪಿತ ನೌಕರರಿಗೆ ವಿಧಿಸಲಾದ ಕಠಿಣ ಶಿಕ್ಷೆ : ದಂಡನೆಗೆ ಸಂಬಂಧಿಸಿದಂತೆ ರಾಜ್ಯ ಉಚ್ಚ ನ್ಯಾಯಾಲಯವು ದಿನಾಂಕ; 3.8.2004 ರಲ್ಲಿ ತಡೆಯಾಜ್ಞೆ ಹೊರಡಿಸಿದ ಪ್ರಯುಕ್ತ, ಸದರಿ ನೌಕರರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ ಈ ನಿರ್ದೇಶನಾಲಯದ ದಿನಾಂಕ: 19.8.2004 ರ ಪತ್ರದಲ್ಲಿ (ಉಲ್ಲೇಖ-2) ಲೋಕಾಯುಕ್ತರವರ ಪೊಲೀಸ್ ಮಹಾನಿರೀಕ್ಷಕರಿಂದ ಸ್ಪಷ್ಟೀಕರಣ ಕೋರಲಾಯಿತು. ಅದರಂತೆ ಉಲ್ಲೇಖ (3) ರಲ್ಲಿನ ಲೋಕಾಯುಕ್ತರವರ ಪೊಲೀಸ್ ಮಹಾನಿರೀಕ್ಷಕರ ದಿನಾಂಕ: 8.9.2004 ರ ಪತ್ರದಲ್ಲಿ ನೀಡಿದ ಸ್ಪಷ್ಟೀಕರಣದಂತೆ ಅಂದರೆ ಕರ್ನಾಟಕ ಉಚ್ಚ ನ್ಯಾಯಾಲಯದ ತಡೆಯಾಜ್ಞೆಯು ನೌಕರರಿಗೆ ವಿಧಿಸಿದ ಕೇವಲ "ಸೆರೆವಾಸ" ಕ್ಕೆ (ಸೆಂಟನ್ಸ್) ಮಾತ್ರ ಅನ್ವಯಿಸುವುದರಿಂದ, ಜಿಲ್ಲಾ ನ್ಯಾಯಾಲಯವು ನೀಡಿದ "ಶಿಕ್ಷೆ" ಈಗಲೂ ಜಾರಿಯಲ್ಲಿದ್ದು, ಕರ್ನಾಟಕ ಸರ್ಕಾರದ ಸುತ್ತೋಲೆ ಸಂ: ಸಿಆಸುಇ:8:ಸೇಶಿವಿ:95 ದಿನಾಂಕ: 26.6.1996 ರಂತೆ ಸದರಿ ನೌಕರರನ್ನು ಕೂಡಲೇ ಸೇವೆಯಿಂದ ವಜಾ ಮಾಡುವಂತೆ ತಿಳಿಸಿರುವುದರಿಂದ ಈ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(13)ಸಿಆರ್:11:96-97, ದಿನಾಂಕ; 15ನೇ ಸೆಪ್ಟೆಂಬರ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಆರ್.ಎಸ್. ಕೊಳ್ಳೂರ, ಪ್ರಥಮ ದರ್ಜೆ ಸಹಾಯಕ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಕಛೇರಿ, ಧಾರವಾಡ ಇವರ ಮೇಲಿನ ಲಂಚ ಸ್ವೀಕಾರ ಟ್ರ್ಯಾಪ್ ಪ್ರಕರಣದಲ್ಲಿ, ಧಾರವಾಡ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವು ವಿಚಾರಣೆ ನಡೆಸಿ ಒಂದು ವರ್ಷ ಕಠಿಣ ಶಿಕ್ಷೆಯನ್ನು ಐದು ಸಾವಿರ ರೂಪಾಯಿಗಳ ದಂಡ ವಿಧಿಸಿರುವ ಕಾರಣ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಶಿಫಾರಸ್ಸಿನಂತೆ ಸದರಿ ನೌಕರರನ್ನು ಕೆಸಿಎಸ್ (ಸಿಸಿಎ) ನಿಯಮ 8(viii) ರ ಪ್ರಕಾರ ಸೇವೆಯಿಂದ ವಜಾಗೊಳಿಸಿರುತ್ತೇನೆ.

ಪಿ.ಆರ್. 1341

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**IN THE COURT OF THE ADDITIONAL REGISTRAR OF CO-OPERATIVE SOCIETIES (CONSUMERS & MARKETING), BANGALORE-560052, OFFICE OF THE REGISTRAR OF CO-OPERATIVE SOCIETIES, NO.1, ALI ASKER ROAD, BANGALORE-560052.**
**Dispute No. A(C&M) Dis/D7/3556/2004-05**

**Petitioner:** **V/s** **Respondent:**

The Managing Director,
Malnad Areca Marketing Co-op
Society Ltd., (MAMCOS)
Post Box No. 13, APMC Yard,
Shimoga

1. M/s. Mundre K.M. Ningappa & Co., Arecanut Merchants, No. 16, B-Block, APMC Yard, Shimoga Rep by its Partner, Sri M.N. Omkarappa.
2. Sri M.N. Basappa S/o Ningappa partner, M/s. Mundre K.M. Ningappa & Co., Arecanut Merchants, No. 16, B-Block, APMC Yard, Shimoga.
3. Sri M.N. Gangadharappa S/o. Ningappa Partner, M/s. Mundre K.M. Ningappa & Co., Arecanut Merchants, No. 16, B-Block APMC Yard, Shimoga.
4. Sri M.N. Malleshappa S/o Ningappa Partner, M/s. Mundre K.M. Ningappa & Co., Arecanut Merchants, No. 16, B-Block APMC Yard, Shimoga.
5. Sri M.N. Omkarappa S/o. Ningappa Partner, M/s. Mundre K.M. Ningappa & Co., Arecanut Merchants, No. 16, B-Block APMC Yard, Shimoga.
6. Sri M.H. Jayanna S/o. M.M. Halappa Partner, M/s. Mundre K.M. Ningappa & Co., Arecanut Merchants, No. 16, B-Block APMC Yard, Shimoga.

**NOTICE OF ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT, 1959**

1. Whereas, the Petitioner Society has filed the above dispute before me under Section 70 of the Karnataka Co-operative Societies Act, 1959 for recovery of a sum of Rs. 1991332.50 along with interest at 16% on the above said amount of Rs. 1991332.50 from 1.9.2004 till the date of realization from the Respondents. The dispute is taken on file under Dispute No. A(C&M) D7/3556/2004-05.

1. Whereas, it is brought to my notice by the Petitioner Society by an application filed under Section 103 of the Karnataka Co-operative Societies Act, 1959 that the Respondents are contemplating to convey or alienate or dispose the immovable properties belonging to the Respondents mentioned in the Schedule hereunder, with the intent to delay the enforcement or execution of any award or order that may be passed in the above dispute against them.
2. Whereas, the Petitioner Society has further stated that if the respondents are not prevented from doing so, the Petitioner Society will be left with no means to recover the amount even if any award/decree is obtained against the respondents.
3. Whereas, I am fully convinced that the disposal of Schedule Property of the Respondents would defeat or delay the enforcement or execution of any order/decree that may be passed against the respondents.
4. Hence, I pass the following order.

**ORDER**

Under the Circumstances explained above and in exercise of powers vested in me under Section 103 of the Karnataka Co-operative Societies Act, 1959, as conferred by the Government Notification No. CMW/169/CLM/2001 dated: 21.11.2001, I, Nagaraja B., Additional Registrar of Co-operative Societies (Consumer and Marketing), Bangalore, do here by order the conditional attachment of the movable/immovable properties of the Respondent as mentioned in the Schedule hereunder before Judgement in the above case.

Notice is hereby given to the respondents that if they desire to have the conditional attachment raise, they should furnish cash security to the extent of Rs. 20,00,000 (Rupees Twenty Lakhs only) by depositing the said amount in the Petitioner Co-operative Society (Consumer and Marketing), Bangalore under Suspense Account and produce the original receipt/challan issued thereon to this office on or before 25.10.2004 without fail.

If they fail to furnish the cash security as ordered above within/the stipulated period, this conditional attachment will be confirmed as made absolute.

